# ಮಂದಾಕಿನಿ

ಸಂಕ್ರಾಂತಿ ಸಂಚಿಕೆ

ಜನವರಿ ೧೯೬೦

ಸಂಪುಟ ೧ * * * * * ಸಂಚಿಕೆ ೪



ವಾರ್ಷಿಕ ಚಂದಾ

ಐದು ರೂಪಾಯಿ

ಶಹಪುರ.

ಬಿಡಿ ಸಂಚಿಕೆ

ಐವತ್ತು ಪೈಸೆ

# ಒಳಪುಟಗಳಲ್ಲಿ



**PRESIDENT'S SECRETARIAT,**
**Rashtrapati Bhavan,**
**NEW DELHI-4.**

**No. F- 16-RL/69.** **Nevnember 11, 1969,**

**Dear Sir,**

**I am directed to acknowledge the receipt of your letter of the 13th September, 1969 to the President. He is glad to know that you are bringing out a magazine entitled "MANDAKINI." with all good wishes from the president,**

**Yours faithfully,**
**( K. R. Gupta )**
**Additional Private Secretary**
**to the president.**

**Shri Sagar Krishnacharya, Mohana Mandir,**
**old peth, Shahapur Dist Gulbarga.**

ಸಂಪಾದಕರು

ವಿದ್ವಾನ್ ಜಿ. ಎಂ. ಗುರುಸಿದ್ಧಶಾಸ್ತ್ರೀ
ಕಾವ್ಯತೀರ್ಥ

ಗೌರವ ಸಂಪಾದಕರು

ಶ್ರೀ ಸಗರ ಕೃಷ್ಣಾಚಾರ್ಯ
ಎಂ. ಎ., ಬಿ. ಇಡಿ.

ಸಲಹೆಗಾರರು

ಶ್ರೀ ಸಿದ್ಧಯ್ಯ ಪುರಾಣಿಕ
ಬಿ. ಎ., ಎಲ್. ಎಲ್. ಬಿ.

ಶ್ರೀ ರಾಘವೇಂದ್ರ ಇಟಗಿ ಎಂ. ಎ.

ಶ್ರೀ ನಾಗಪ್ಪ ಶೆಟ್ಟರ ಶಹಪುರ

ಪ್ರಕಾಶಕರು

ಶ್ರೀ ಜಿ. ಎಂ. ಗುರುಬಸವಾರ್ಯ
ಶ್ರೀ ಬಸವರಾಜ ಮುದ್ರಣಾಲಯ
ತಾ. ಶಹಪುರ. ಜಿ. ಕಲಬುರ್ಗಿ.

---

**ಲೇಖಕರಲ್ಲಿ ಸವಿನಯ ಅರಿಕೆ**

ಒಳ್ಳೆಯ ಬರಹಗಾರರು ತಮ್ಮ ಲೇಖನ ಕತೆ, ಕವನ, ನಾಟಕ, ಪ್ರಬಂಧ, ಹರಟೆ ಮುಂತಾದುದನ್ನು ಕಾಗದದ ಒಂದೇ ಕಡೆಗೆ ಸ್ಫುಟವೂ ಶುದ್ಧವೂ ಆದ ಅಕ್ಷರಗಳಲ್ಲಿ ಬರೆದು ಕಳಿಸಬೇಕು. ಸ್ವೀಕೃತವಾದವುಗಳನ್ನು ಯಥಾವಕಾಶ ಪ್ರಕಟಿಸಲಾಗುವುದು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲು ಅಂಚೆ ಚೀಟಿ ಇರಿಸುವುದು ಅಗತ್ಯ.

ಧಾರಾವಾಹಿಯಾಗಿ ಕಾದಂಬರಿಯನ್ನು ಪ್ರಕಟಿಸಲು ಇಚ್ಛಿಸುವವರು ಕಾದಂಬರಿಯ ಪೂರ್ತಿ ಪ್ರತಿಯನ್ನು ಕಳಿಸಬೇಕು. ಸಲಹೆಗಾರರಿಂದ ಅದು ಮನ್ನಣೆ ಪಡೆದರೆ ಮಾತ್ರ ಅದನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ವ್ಯಕ್ತಿಚಿತ್ರ ಜೀವನ ಚಿತ್ರ ಚುಟುಕ ಮುಂತಾದವುಗಳಿಗೂ ಪತ್ರಿಕೆಯಲ್ಲಿ ಸ್ಥಾನವಿದೆ. ಕರ್ನಾಟಕದ ಪ್ರತಿಯೊಂದು ಭಾಗದವರೂ ಇದು ತಮ್ಮ ಪತ್ರಿಕೆಯೆಂದೇ ಭಾವಿಸಿ ಅವಶ್ಯ ತಮ್ಮ ಕೃತಿಗಳನ್ನು ಪ್ರಕಟನೆಗಾಗಿ ಕಳಿಸಬೇಕು. ಹೊರನಾಡ ಕನ್ನಡಿಗರೂ, ಪರದೇಶಗಳಲ್ಲಿದ್ದ ಕನ್ನಡಿಗರೂ ಸಹ ತಮ್ಮ ಸಾಹಿತ್ಯಿಕ ಕೃತಿಗಳೊಂದಿಗೆ ತಮ್ಮ ಅಲ್ಲಿನ ಜೀವನ, ಸಾಹಿತ್ಯ ರಂಗದಲ್ಲಿ ಸಾಧಿಸಿದ ಪ್ರಗತಿ, ಅಲ್ಲಿನ ತಮ್ಮ ಸಮಸ್ಯೆಗಳು ಮುಂತಾದುವನ್ನು ಕುರಿತೂ ಅತ್ಯುತ್ತಮ ಬರೆಹಗಳನ್ನು ಕಳಿಸಿದಲ್ಲಿ ಅವುಗಳನ್ನು ಸಂತೋಷದಿಂದ ಪ್ರಕಟಿಸಲಾಗುವುದು. ಲೇಖಕರು ಇದು ತಮ್ಮ ಪತ್ರಿಕೆಯೆಂದೇ ಭಾವಿಸಿ ಇದರ ಉತ್ಕರ್ಷಕ್ಕಾಗಿ ಸರ್ವವಿಧದಿಂದಲೂ ಪ್ರಯತ್ನಿಸಬೇಕು.

xxxx

ಜಾಹೀರಾತಿನ ಬಗ್ಗೆ ಪತ್ರ ವ್ಯವಹಾರ ಮಾಡುವವರೂ ಚಂದಾ ಹಣ ಮುಂತಾದುದನ್ನು ಕಳಿಸುವವರೂ ಪ್ರಕಾಶಕರ ವಿಳಾಸಕ್ಕೆ ಕಳಿಸಬೇಕು.

# ಮಂದಾಕಿನಿ

ಮಾಸಪತ್ರಿಕೆ



ಸಂಪುಟ ೧ | ಜನವರಿ ೧೯೭೦ | ಸಂಚಿಕೆ ೪

## ಭಗವದ್ಗೀತೆ

ಆ ದಿನದ ಭಾರತದ ಘೋರ ತಮ ಕಾಳಗದಿ
ತಾನು ತನ್ನದು ಎಂಬ ಹೀನ ಭಾವನೆಯಿಂದ
ಮೋಹ ಪರವಶನಾಗಿ ಜ್ಞಾನ ವಿರಹಿತನಾಗಿ
ವೀರನರ ನಿಂತಿರಲು ಕರ್ತವ್ಯವನು ಮರೆದು
ಅವನ ಸಾರಥಿಯಾದ ಜ್ಞಾನ ನಿಧಿ ಗೋವಳನ
ಬ್ರಹ್ಮಾಂಡ ನಾಯಕನ ದಿವ್ಯತಮ ಮುಖದಿಂದ
ಮಧುರ ತಮ ವಾಣಿಯಲಿ ಹರಿದು ಬಂದವಳಾದ
ಅಮರ ಗಂಗೆಯು ನೀನು.

ಎಂ. ಪಿ. ಮಹಿಷಿ.

# ನಗುತ ಸಾಗು ನೀನಿಲ್ಲಿಂದ

ಉನ್ನತ ಮಟ್ಟದಿ ನಡೆ-ನುಡಿ ಇರಿಸುತ
ನಡೆಯುತಲಿರು ನೀ ಮುನ್ನೋಡಿ !
ಕಾಲನ ಹೃದಯದ ಆಳದಲಿಳಿಯುತ
ಮುಂದರಿಯುತಲಿರು ಭಯದೂಡಿ !

ನೋವಿನ ಮೇಲೆಯೆ ನೋವನು ತಿನ್ನುತ
ಸಾಗುತಲಿರು ನೀ ಇತ್ತ ಕಡೆ
ಜಗವನೆ ಗೆಲ್ಲುವ ಜೀವನ ಸೌರಭ
ಬೀರುತ ನಡೆದಿರು ಅತ್ತ ಕಡೆ

ಕೆಡಕು ಸೇಡುಗಳ ಸುಳಿಯಲಿ ಸಿಕ್ಕದೆ
ಉಳಿಯುತ ನಡೆದಿರು ಒಂದು ಕಡೆ
ಒಳಿತು ಒಲವುಗಳ ಸಾಗರವೀಜುತ
ಸಾಗುತ ನಡೆ ನೀ ಮುಂದುಗಡೆ

ಆಗ ನಿನ್ನತಾ ನೆನೆವುದು ಜನಮನ
ಕಂಬನಿ ಸುರಿವುದು ಜಗವೆಲ್ಲ !
ನಿನ್ನ ನೆನೆದು ಜಗ ಕಂಬನಿ ಸುರಿದರೆ
ನಗುತ ಸಾಗು ನೀನಿಲ್ಲಿಂದ !

— ಇಂದಿರೇಶ

(ಉರ್ದು ಕವನವೊಂದರ ಭಾವಾನುವಾದ)

# ಅಮಲಾಪುರದ ಹನುಮಪ್ಪ

— ಎಚ್. ಪಿ. ಜೋಶಿ ಶಿರವಾಳ

**ಸ್ಥಳ ಪರಿಚಯ :—** ಶಹಾಪುರದಿಂದ ೩ ಮೈಲು ಅಂತರದಲ್ಲಿ ವಿಜಾಪುರ, ಗುಲಬರ್ಗಾ ರೋಡುಗಳ ಮಧ್ಯದಲ್ಲಿ ಈ ದೇವಸ್ಥಾನವು ಇರುತ್ತದೆ. ಈ ಸ್ಥಳಕ್ಕೆ ಅಮಲಾಪುರವೆಂಬ ಹೆಸರು. ಚರಿತ್ರೆಯ ಸಂದರ್ಭ ಹೀಗಿದೆ.

ರಾಮನ ಪಟ್ಟಾಭಿಷೇಕ ಆದ ನಂತರ, ಹನುಮಂತನು ರಾಮನಿಂದ ನಿರೋಪವನ್ನು ಪಡೆದು ಅಂಜನಾದ್ರಿಗೆ ಹೋಗಿ ರಾಮ ಮಂತ್ರವನ್ನು ಜಪಿಸುತ್ತ ರಾಮ ಧ್ಯಾನದಲ್ಲಿ ಮಗ್ನನಾದನು. ಇದರಲ್ಲಿಯೇ ತ್ರೇತಾಯುಗವು ಸಮಾಪ್ತಿಯಾಯಿತು. ಆಗ ಮಾರುತಿಯು ಸಮಾಧಿಯಿಂದ ಎಚ್ಚತ್ತನು. ತನ್ನ ಸ್ವಾಮಿಯನ್ನು ನೋಡಬೇಕೆಂಬ ಅಪೇಕ್ಷೆಯುಂಟಾಯಿತು. ಅಲ್ಲಿಂದ ದಕ್ಷಿಣ ಮುಖವಾಗಿ ಪ್ರಯಾಣ ಬೆಳಸಿದನು. ಮಾರ್ಗದಲ್ಲಿ ಮೇಲ್ಗಿರಿ ಪರ್ವತವು ಕಾಣಿಸಿತು. ಆ ಪರ್ವತದ ಪ್ರದೇಶದಲ್ಲಿ ರಮ್ಯವಾದ ಸ್ಥಳದಲ್ಲಿ ಗುಂಡಿಗೆ ಅಂತು ರಾಮ ಮಂತ್ರವನ್ನು ಜಪಿಸುತ್ತ ಸಮಾಧಿಸ್ಥನಾದನು. ಮುಂದೆ ದ್ವಾಪರ ಯುಗವು ಪ್ರಾರಂಭವಾಯಿತು. ದಾಯಾದಿಗಳೊಡನೆ ಜೂಜಾಡಿ ಪಾಂಡವರು ಅಜ್ಞಾತವಾಸಕ್ಕಾಗಿ ಹೊರಟಾಗ, ಈ ಮೇಲ್ಗಿರಿ ಪರ್ವತದಲ್ಲಿ ವಾಸ ಮಾಡಿದ್ದರು. ಆಗ ಭೀಮನು ಆಹಾರಾರ್ಥವಾಗಿ ಸಂಚಾರ ಮಾಡುತ್ತ ಹೊರಟಾಗ ಆ ನಿರ್ಜನ ಪ್ರದೇಶದಲ್ಲಿ ರಾಮನಾಮ ಕೇಳಿಸಿತು. ಆ ಶಬ್ದ ಬರುವ ದಿಕ್ಕಿಗೆ ಪ್ರಯಾಣ ಬೆಳೆಸಿದನು. ಆ ಸ್ಥಳದಲ್ಲಿ ಮಾರುತಿಯು ರಾಮಧ್ಯಾನದಲ್ಲಿ ಮಗ್ನನಾಗಿದ್ದನು. ಭೀಮನು ಮಾರುತಿಯನ್ನು ನೋಡಿ ನಮಸ್ಕರಿಸಿದನು. ಆಗ ಮಾರುತಿಯು ಸಮಾಧಿಯಿಂದ ಜಾಗ್ರತನಾದನು. ಭೀಮನನ್ನು ಹರಸಿ ಬೋಳೈಸಿದನು. ಭೀಮನು ಮತ್ತೆ ತನ್ಮಯನಾದನು. ಪ್ರಾಣವಾಯುವಿನಿಂದ ಹನುಮ ಭೀಮ ಶಕ್ತಿಗಳೆರಡೂ ಏಕತ್ವ ಹೊಂದಿದವು. ಪುನಃ ಹನುಮನು ರಾಮಧ್ಯಾನದಲ್ಲಿ ಮಗ್ನನಾದನು. ಭೀಮನು ಹನುಮಂತನನ್ನು ವಂದಿಸಿ ತನ್ನ ಸ್ಥಳಕ್ಕೆ ಮರಳಿದನು. "ಪ್ರಥಮೋ ಹನುಮನ್ನಾಮ ದ್ವಿತೀಯೋ ಭೀಮ ಏವಚ ಎಂಬಂತೆ" ಪ್ರಾಣ ದೇವರ ಮೂರು ಅವತಾರಗಳಲ್ಲಿ ಎರಡು ರೂಪಗಳು ಈ ಪ್ರದೇಶದಲ್ಲಿ ಏಕರೂಪವಾಗಿ, ಜ್ಞಾನ ಭಕ್ತಿಗಳೆರಡನ್ನೂ, ಭಕ್ತರಿಗೆ ದಯ ಪಾಲಿಸುತ್ತವೆ.

* * * * *

ಕಲಿಯುಗದ ಆದಿ ಭಾಗವು ಗತಿಸಿ ಉತ್ತರಾರ್ಧವು ಪ್ರಾರಂಭವಾಗಿದೆ.

ತನ್ನ ಸ್ವಾಮಿಯು ವೆಂಕಟಗಿರಿಯಲ್ಲಿ ಶ್ರೀನಿವಾಸನೆಂಬ ಅಭಿಧಾನದಿಂದ ಇರುವ ನೆಂದು ಅಪರೋಕ್ಷ ಜ್ಞಾನದಿಂದ ಅರಿತ ಪ್ರಾಣ ದೇವರು, ತನ್ನ ಹೃದಯ ಮಂಟಪ ದಲ್ಲಿ ಮೂಲ ರಾಮನನ್ನು ಆಹ್ವಾನಿಸಿ ಪುನಃ ರಾಮ ಮಂತ್ರವನ್ನು ಜಪಿಸುತ್ತ ಸಮಾಧಿ ಸ್ಥಿತಿಯನ್ನು ಹೊಂದಿದನು. ವೆಂಕಟಗಿರಿಯಲ್ಲಿ ಶೇಷ ಪರಿಯಂಕದ ಮೇಲೆ ಪವಡಿಸಿದ ಶ್ರೀವಾಸ ದೇವರಿಗೆ ಹನುಮಂತನ ಮೊರೆ ಕೇಳಿಸಿತು. ಭಕ್ತನ ಕೂಗು ಕಿವಿಗೆ ಕೇಳಿಸಿದೊಡನೆ ಶ್ರೀಹರಿಯು ಎದ್ದು ಕುಳಿತನು. ರಾಮಾವತಾರದಲ್ಲಿ ತನಗೆ ಅಪಾರ ಸೇವೆ ಸಲ್ಲಿಸಿದ ಆಂಜನೆಯನೆಂದು ಅರಿತುಕೊಂಡನು. ಭಕ್ತರ ಇಷ್ಟಾರ್ಥ ವನ್ನು ಸಲ್ಲಿಸುವದು ತನ್ನ ಕರ್ತವ್ಯವು ಎಂದು ವೆಂಕಟೇಶನು ಗರುಡ ವಾಹನ ನಾಗಿ "ಶೇಷಾದ್ರಿಯಂಬಿಟ್ಟು ಮೇಲ್ಗಿರಿಯ ನಿಂತು" ಭಕ್ತನನ್ನು ಅನುಗ್ರಹಿಸಿ ದನು. ಭಕ್ತನಿಗೆ ದರ್ಶನ ಕೊಡುವದು ಸ್ವಾಮಿಯು ಕೆಲವು ಕಾಲ ಆ ಪರ್ವತದ ಉತ್ತುಂಗ ಶ್ರೇಣಿಯ ಸ್ಥಳದಲ್ಲಿ ವಾಸ ಮಾಡಿದನು. ಸ್ವಾಮಿಯ ಆಗ ಮನದಿಂದ ಈ ಪ್ರದೇಶವು ಪವಿತ್ರವಾಯಿತು; ಪಾವನವಾಯಿತು; ಮಲಿನವು ಅಳಿದು ಅಮಲವಾಯಿತು. ಹಿಂದೊಂದು ಕಾಲದಲ್ಲಿ ಸಗರ ರಾಜನು ಈ ಪ್ರದೇಶ ವನ್ನು ಆಳುತ್ತಿದ್ದನು. ಅಂದಿನಿಂದ ಈ ಪ್ರದೇಶಕ್ಕೆ ಸಗರ ನಾಡೆಂದು ಹೆಸರು ಪ್ರಸಿದ್ಧಿಯಾಯಿತು. ಕೃಷ್ಣಾ ಭೀಮಾ ನದಿಗಳ ನಡುವೆ ಈ ನಾಡು ಇರುವದು. ಕ್ರಿ. ಶ. ೧೫ ನೂರರಲ್ಲಿ ಈ ಪ್ರದೇಶಗಳಲ್ಲಿ ಅಲ್ಲಲ್ಲಿ ಪೆಂಡಾರಿಗಳ ತಂಡಗಳು ಕಾಣಿ ಸುತ್ತಿದ್ದವು. ಅವುಗಳಲ್ಲಿ ಎಂಕಪ್ಪನ ತಂಡ ಶಕ್ತಿ ಸಾಮರ್ಥ್ಯಗಳಲ್ಲಿ ಪ್ರಸಿದ್ಧಿಯಾಗಿ ದ್ದಿತು. ಬೇಟೆಯಾಡಿ ಜೀವಿಸುವದು ಇವರ ಧರ್ಮವಾಗಿದ್ದಿತು.

ಒಂದು ದಿನ ಎಂಕಪ್ಪನ ತಂಡಿನವರು ಬೇಟೆಯ ನಿಮಿತ್ಯ ಆ ಪರ್ವತದ ಪ್ರದೇಶವಲ್ಲಿ ಪ್ರಯಾಣ ಬೆಳಸಿದರು. ಹಿಂಸಕ ಪ್ರಾಣಿಗಳನ್ನು ಕೊಲ್ಲುತ್ತ ಬೇಟೆ ಹುಡುಕುತ್ತ ಬೇಡ ಪಡೆ ಮುಂದೆ ಸಾಗಿತು. ಬಿಸಿಲಿನ ತಾಪದಿಂದ ಗುಂಪಿನ ಮುಖ್ಯ ಸ್ಥನಿಗೆ ಬಾಯಾರಿಕೆಯಾಯಿತು. ಜಲ ಶೋಧಾರ್ಥವಾಗಿ ಕೆಲವು ಪರಿಚಾರಕರು ಹಳ್ಳಕೊಳ್ಳಗಳನ್ನು ಹುಡುಕ ಹತ್ತಿದರು. ಎಲ್ಲಿಯೂ ತೊಟ್ಟು ನೀರು ಸಿಗಲಿಲ್ಲ. ಆಗ ನಾಯಕನು ತನ್ನ ಕುಲ ಸ್ವಾಮಿಯಾದ ತಿರುಪತಿ ತಿಮ್ಮಪ್ಪನಿಗೆ ಮೊರೆ ಇಟ್ಟನು. ನನ್ನ ತಪ್ಪನ್ನು ಕ್ಷಮಿಸಿ ಕಾಪಾಡಬೇಕೆಂದು ಅನನ್ಯ ಭಕ್ತಿ ಯಿಂದ ಬೇಡಿಕೊಂಡನು. ದಂಡ ಪ್ರಣಾಮ ಮಾಡಿದನು. ಭಕ್ತ ರಕ್ಷಕನಾದ ಶ್ರೀನಿವಾ ಸನು ಗೋವಳಿಗನ ರೂಪದಲ್ಲಿ ದರ್ಶನ ಕೊಟ್ಟನು. ಶಮ ದಮ ಶಾಂತಿಯನ್ನು ಅನುಗ್ರಹಿಸಿದನು. ಎಂಕಪ್ಪ ! ನಿನ್ನ ಭಕ್ತಿಗೆ ಮೆಚ್ಚಿದೆನು. ನಾನು ಇದೇ ಸ್ಥಳದಲ್ಲಿ ವಾಸವಾಗಿರುವೆನು. ನೀನು ಈ ನಾಡಿಗೆ ಒಡೆಯನಾಗುವಿ. ಪುಣ್ಯ ಕಾರ್ಯಗಳನ್ನು

ಮಾಡುತ್ತ ಹೋಗು ಮುಂದೆ ನಿನಗೆ ಸದ್ಗತಿ ಯಾಗುವದು. ನನ್ನ ಸೇವೆಯಲ್ಲಿ ನಿರತನಾಗು ಎಂದು ಹೇಳಿ ಮಾಯವಾದನು ಕೆಲವು ಕಾಲದ ಮೇಲೆ ವೆಂಕಟಪ್ಪ ನಾಯಕನು ಆ ! ಸ್ಥಳದಲ್ಲಿ ಗೋಪಾಲ ಸ್ವಾಮಿಯ ಹೆಸರಿನಿಂದ ದೇವಾಲಯ ವನ್ನು ಕಟ್ಟಿಸಿದನು. (ಸುರುಪೂರ) ವೆಂಕಟಪ್ಪ ನಾಯಕನು ಆ ದೇವಸ್ಥಾನದ ಮುಂಭಾಗದಲ್ಲಿ ತನ್ನ ಬಿಡಾರವನ್ನು ಮಾಡಿದನು ಅದರ ಅಕ್ಕ ಪಕ್ಕಗಳಲ್ಲಿ ತನ್ನ ಅಂಗರಕ್ಷರ ಮನೆಗಳನ್ನು ಕಟ್ಟಿಸಿದನು ಗುಡಿಯ ಆವರಣದ ಸುತ್ತಲೂ ಪರಿವಾರ ದವರಿಗೆ ವಸತಿಗಾಗಿ ಏರ್ಪಾಟ ಮಾಡಿದನು. ನೂರಾರು ಭವ್ಯ ಭವನಗಳಿಂದ ನಿರ್ಮಿತ ವಾದ ಈ ಸುಂದರ ಪಟ್ಟಣಕ್ಕೆ ತನ್ನ ಸ್ವಾಮಿಯ ಹೆಸರಿನ ಮೇಲೆ ಸುರುಪೂರವೆಂದು ಹೆಸರಿಟ್ಟನು ಈ ಸುರುಪೂರು ಸಗರ ನಾಡಿನಲ್ಲಿರುವದು. ಕೃಷ್ಣಾ ಭೀಮಾ ಮಧ್ಯದ ಪ್ರದೇಶದಲ್ಲಿ ಈ ! ಸಗರ ನಾಡು ಇರುವದು ಈ ಸಗರ ನಾಡಿಗೆ ಶಿರೋಭೂಷಣ ವಾಗಿರುವದು ವೇಲ್ಗಿರಿ ಪರ್ವತ ಈ ! ಪರ್ವತಕ್ಕೆ ಮೋಜಿಗಾಗಿ ಬೇಟೆಯಾಡಲು ಬಂದರು ಸುರುಪುರದ ಅರಸರು ಶಭರ ಸಂಕುಲನಾಗಿ ಬಂದ ವೆಂಕಟಪ್ಪ ನಾಯ ಕನಿಗೆ ಅಂದು ಒಂದೂ ಬೇಟೆ ಸಿಗದೆ ಹೋಯಿತು. ಹಿಂಸ್ರಕ ಪ್ರಾಣಿಗಳನ್ನು ಹುಡು ಕುತ್ತ ಬಸವನ ಕೊಳ್ಳಕ್ಕೆ ಇಳಿದರು ಬೇಟೆ ಸಿಗದೆ ನಿರಾಶರಾಗಿ ನೀರನ್ನು ಕುಂಟಿ ವಿಶ್ರಾಂತಿಗಾಗಿ ಕುಳಿತರು. ತುಸು ಸಮಯದ ಮೇಲೆ ಕಾಡಮಿಗವೊಂದು ನೀರು ಕುಡಿಯುವದಕ್ಕೆ ಆ ! ಕೊಳ್ಳಕ್ಕೆ ಇಳಿಯಿತು. ಬೇಟೆಗಾಗಿ ಕಾತರಿಸಿ ಕೂತಿದ್ದ ವೆಂಕಟಪ್ಪ ನಾಯಕನಿಗೆ ಆ ! ಮಿಕವು ಕಾಣಿಸಿತು ಕೂಡಲೆ ಬಿಲ್ಲಿಗೆ ಬಾಣವನ್ನು ಹೂಡಿ ಗುರಿ ಇಟ್ಟು ಹೊಡೆದನು. ಅಂಬು ಮುಂಬರಿದು ಹೋಗುವದರೊಳಗಾಗಿ ಅಂಬನ್ನು ಕುಂಟುತಿದ್ದ ವರಹವು ತಲೆ ತಗ್ಗಿಸಿ ಗುರಿ ತಪ್ಪಿಸಿಕೊಂಡಿತು. ಬಾಣ ಹುಸಿಯಾದಕ್ಕೆ ದೊರೆಯು ಅದರ ಬೆನಹತ್ತಿ ಸಾಗಿದನು. ಹಿಂದೆ ರಾಮಚಂದ್ರ ನು ಮಾಯಾ ಮೃಗದ ಹಿಂದೆ ಬಹೂದೂರ ಹೋದಂತೆ; ಇಂದು ವೆಂಕಟಪ್ಪ ನಾಯಕನು ವರಹರೂಪಿಯಾದ ಮಾರುತಿಯ ಬೆನ್ನ ಹತ್ತಿ ಹೋದನು ಕಡೆಗೆ ಆ ! ವರಹವು ದೊರೆಗೆ ಕಾಣಿಸಿ ಕೊಳ್ಳುವಂತ ತಾನು ವಾಸವಾಗಿದ್ದ ಪೊದೆಯಲ್ಲಿ ಹೊಕ್ಕು ಮಾಯವಾಯಿತು. ಬೇಟೆಗಾರರು ಆ ಪೊದೆಯೆಲ್ಲವನ್ನು ಶೋಧ ಮಾಡಿ ದರು ಎಲ್ಲಿಯೂ ಮಿಕವು ಕಾಣಿಸಲಿಲ್ಲ. ಎಲ್ಲಾ ಪರಿವಾರಕ್ಕೆ ಆಶ್ಚರ್ಯವಾಯಿತು ಆಶ್ಚರ್ಯದ ವಿಚಾರದಲ್ಲಿ ಮಗ್ನರಾಗಿದ್ದಾಗಲೇ ಸೂರ್ಯನು ಪಶ್ಚಿಮ ಘಟ್ಟದಲ್ಲಿ ಸೇರಿ ಅಸ್ತನಾಗಿದ್ದನು.

"ಮೆಲ್ಲ ಮೆಲ್ಲನೆ ತರಣಿ ಮುಳುಗಿದೊಡೆ, ಅಲ್ಲಲ್ಲಿ ಮೂಡಿದವು ಸಂಜೆ ತಾರಕೆಗಳು" ತರುಣಿ ತೊಲಗಿದೊಡೆ ಮಬ್ಬು ಗತ್ತಲು ಆ ಸ್ಥಳವನ್ನು ಆವರಿ

ಸಿತು ಅಂತರಿಕ್ಷದಲ್ಲಿ ಮಿನುಗುತ್ತಿದ್ದ ತಾರೆಗಳು ತಮ್ಮ ತಮ್ಮ ಮಂದ ಪ್ರಕಾಶ ವನ್ನು ಬೀರ ತೊಡಗಿದವು. ಕತ್ತಲೆ ಕವಿಯುವದರೊಳಗಾಗಿ ನಾಯಕನ ಪರಿ ವಾರವು ಶಿಬಿರವನ್ನು ಸೇರಿತ್ತು ಬೊಂಬಾಳಗಳ ಬೆಳಕಿನಲ್ಲಿ ರಾಜಪರಿವಾರದವರು ಭೋಜನವನ್ನು ತೀರಿಸಿ ಮಲಗಿ ನಿದ್ರಿಸಹತ್ತಿದರು. "ತಾನೊಂದು ಬಗೆದರೆ, ದೈವ ವೊಂದು ಬಗೆಯಿತು" ಎಂಬಂತೆ ಮಾರುತಿಯ ಮಾಯೆಯಿಂದ, ಮೈ ಮರೆತು ಮಲಗಿದ್ದ ಶಬರ ಸಂಕುಲದ ನೇತ್ರ ಜ್ಯೋತಿಗಳು ಇಂಗಿ ಅಂಧತ್ವವು ಪ್ರಾಪ್ತ ವಾಯಿತು. ಬೆಳಗಿನ ಬಾಲ ಭಾಸ್ಕರನ ಹೊಂಬಂಣ್ಣದ ಕಿರಣಗಳು ಆ ಬೀಡಿಗೆ ಮಾರುತಿಯ ಮಾಯೆಯಿಂದ ಕತ್ತಲನ್ನು ಕವಿಸಿದ್ದವು. ಕರಿ ಕಾಲಾಳುಗಳು ಬಿಲ್ಲು. ಭಾಲೆಯ ಜನರು ವೀರ ಯೋಧರು ಭಯ ಭೀತರಾಗಿ ಗೋಳುಗರಿಯ ಹತ್ತಿ ದರು. ಶಿಬಿರದ ಸುತ್ತಲು ಹಾಹಾಕಾರವೆದ್ದಿತು- ಅರಿವಿಲ್ಲದೆ ಅರಸು ಅರಚ ಹತ್ತಿ ದನು.ಕೂಳುನೀರುಗಳಿಲ್ಲದಂತಾಯಿತುಕರಿಯ ಚಿತ್ಕಾರವು ಹಯದ ಹೇಷಾರವವುವೀರರ ಚೀರುವ ದುಃಖದ ಉದ್ಗಾರವು ಇವುಗಳಿಂದ ಆ ಕಾತು ಗಜಬಜಿಸಿತು, ಗದ್ದರಿಸಿತು. ಸೂರ್ಯನು ಅಪರಾಂಬುಧಿಗೆ ಇಳಿದನು: ಕೂಳಿಲ್ಲದೆ ಜನರು ಮರ ಮರನೆ ಮರುಗಿದರು. ರಾಜನು ತನ್ನ ಕುಲಸ್ವಾಮಿಗೆ ಮೊರೆ ಇಟ್ಟನು. ನಮ್ಮ ತಪ್ಪು ಕ್ಷಮಿಸೆಂದು ಬೇಡಿಕೊಂಡನು. «ಭಜಿಸುವವರ ಬೆಂಗಾವಲಿಗ" ಇರುವೆನು! ಇದು, ದೇವವಾಣಿಯು. ಭಕ್ತನ ಕೂಗು ಗೋಪಾಲ ಸ್ವಾಮಿಗೆ ಕೇಳಿಸಿತು ಇದು ಮಾರುತಿಯ ಮಾಯೆಯೆಂದು ಅರಿತು, ಸ್ವಾಮಿಯು ಭಕ್ತನಿಗೆ ಸ್ವಪ್ನಾವಸ್ಥೆಯಲ್ಲಿ ದರ್ಶನ ಕೊಟ್ಟನು. ಮಾರುತಿಯ ಮಾಯೆಯಿಂದ ನೀನು ಭ್ರಾಂತನಾಗಿರುವಿ ಈ ಕಾಡಿನಲ್ಲಿ ಮಾರುತಿ ವಾಸ ಮಾಡಿರುವನು. ವರಾಹ ರೂಪದಿಂದ ನಿನ್ನನ್ನು ಇಲ್ಲಿಯ ವರೆಗೆ ಕರೆದು ತಂದಿರುವನು. ಅವನು ವಾಸಮಾಡಿದ್ದ ಕಾಡನ್ನು ಕಡಿದದ್ದರಿಂದ ಕೋಪಗೊಂಡು ಶಾಪ ಕೊಟ್ಟಿದ್ದಾನೆ. ಈಗ ನೀನು ಮಾರುತಿಗೆ ಶರಣು ಹೋಗು. ಹನುಮ, ಭೀಮ ಶಕ್ತಿಗಳೆರಡೂ ನಿನ್ನನ್ನು ಕಾಪಾಡುವವು. ಸಂಜೀವ ಮೂರ್ತಿಯು ಸಂಜೀವಿನಿ ಮಂತ್ರದಿಂದ ನೇತ್ರ ಜ್ಯೋತಿಯನ್ನು ದಯಪಾಲಿ ಸುವನು. ಎಂದು ಹೇಳಿ ಮಾಯವಾದನು. ಮೆಲ್ಲಮೆಲ್ಲನೆ ಬೀಸುವ ಮಂದ ಮಾರು ತನು, ಈ ವಾರ್ತೆಯನ್ನು ರಾಜಧಾನಿಗೆ ಮುಟ್ಟಿಸಿದನು. ಈ ಅಶುಭ ವಾರ್ತೆ ಯು ರಾಜದರ್ಬಾರದಲ್ಲಿ ಹಾಹಾಕಾರವೆಬ್ಬಿಸಿತು. ಅರಮನೆಯ ಅಂತಃಪುರದಲ್ಲಿದ್ದ ರಾಣಿವಾಸವು ಶೋಕ ಸಾಗರದಲ್ಲಿ ಮುಣುಗಿತು. ಆಗ ಮುಖ್ಯ ಅಮಾತ್ಯ ಪದವಿಯಲ್ಲಿದ್ದ ನಿಷ್ಟಿ ಶಿವರುದ್ರಪ್ಪನವರು. ಇದನ್ನು ತಿಳಿದರು ಸ್ವಾಮಿ ನಿಷ್ಠರಾದ ಶ್ರೀ ನಿಷ್ಟಿಯವರು ತಮ್ಮ ಆರಾಧ್ಯ ಮೂರ್ತಿಯಾದ ಗೋಪಾಲ ಸ್ವಾಮಿಯ ಮಂದಿರಕ್ಕೆ ಹೋದರು ಶೋಡಶ ಉಪಚಾರಗಳಿಂದ ದೇವರನ್ನು ಪೂಜಿಸಿದರು.

ತಮ್ಮ ದೊರೆಗೆ ಬಂದ ವಿಪತ್ತು ದೂರಮಾಡೆಂದು ಬೇಡಿಕೊಂಡರು. ದಂಡ
ಪ್ರಣಾಮವಂಗೈದು ತೀರ್ಥ ಪ್ರಸಾದಗಳನ್ನು ಫಲ ಮಂತ್ರಾಕ್ಷತೆಗಳನ್ನು ತಗೆದುಕೊಂಡು
ಶೀವ್ರಗಾಮಿಯಾದ ತುರಗವನ್ನೇರಿ ಇಷ್ಟ ದೇವರನ್ನು ಸ್ಮರಿಸುತ್ತ, ದೊರೆ ಇದ್ದ
ಠಾವಿಗೆ ಬಂದರು. ನಯನಾಂಧರಾದ ಪರಿವಾರವನ್ನು ನೋಡುತ್ತ ವೆಂಕಟಪ್ಪ ನಾಯ
ಕನು ಇದ್ದ ಶಾಮಿಯಾನಾಕ್ಕೆ ಬಂದರು. ತುರಗವನ್ನಿಳಿದು ಶಿಬಿರದ ಬಾಗಿಲಲ್ಲಿ
ನಿಂತು ದೊರೆಗೆ ಮುಜುರೆ ಮಾಡಿ ಒಳಗೆ ಹೋದರು. ಅರಸನ ಪರಸ್ಥಿತಿಯನ್ನು
ಕಂಡು ಕಂಣೀರು ಸುರಿಸಿದರು. ಈ ದುರವಸ್ಥೆಗೆ ಕಾರಣವೇನೆಂದು ಕೇಳಿದರು.
ಕಾಡ ಮಿಕದ ಬೆನ್ನ ಹತ್ತಿ ಬಂದು ಈ ಪ್ರದೇಶದಲ್ಲಿ ಶೋಧಿಸಿದರ ಪರಿಣಾಮ
ವಾಗಿ ಈ ಪರಿಸ್ಥಿತಿ ಪ್ರಾಪ್ತವಾಯಿತೆಂದು ಹೇಳಿದನು. ಇಷ್ಟು ಅನಾಹೂತಕ್ಕೆ
ಏನು ಕಾರಣವಿರಬಹುದೆಂದು ಶಿವರುದ್ರಪ್ಪನವರು ಬಹುವಾಗಿ ಯೋಚಿಸಿದರು.
ತರ್ಕದ ತಾಡವಾಲೆಗಳನ್ನು ತಿರುವಿ ಹಾಕಿದರು. ಯಾವ ಅಂಕಿತಕ್ಕೂ ಮನ ನಿಲ್ಲ
ದಾಯಿತು. ವಿವೇಚನಾಶಕ್ತಿ ಸಾಲದೆ ಕೆಲವು ಪ್ರಮುಖ ಜನರೊಡನೆ ಆ ಸ್ಥಳ
ವನ್ನು ನೋಡಲು ಹೋದರು. ಅಲ್ಲಿ ಕಂಡದ್ದೇನು ? ಗಿಡಗಂಟೆಗಳ ಗುಂಪಿನ ಮಧ್ಯ
ದಲ್ಲಿ ವಲ್ಮೀಕ! ಇತರ ಜೀವ ಜಂತುಗಳ ಸುಳುವು ಅಲ್ಲಿ ಕಾಣಿಸಲಿಲ್ಲ. ಹಾಗಾ
ದರೆ, ಆ ಕಾಡ ಹಂದಿ ಎಲ್ಲಿ ಅಡಗಿರಬಹುದು? ಅದರ ವಾಸಸ್ಥಾನ ಎಲ್ಲಿ ಇರ
ಬಹುದು? ಎಂದು ವಿಚಾರ ಮಾಡುತ್ತಿರುವಾಗಲೇ ಯೋಚನೆಯೊಂದು ಹೊಳೆಯಿತು.
ಆ ಸ್ಥಳದಲ್ಲಿರುವ ಗಿಡಗಂಟೆಗಳನ್ನು ಕಡಿದು ಬಯಲು ಮಾಡಿದರೆ ಎಲ್ಲವೂ ಗೊತ್ತಾ
ಗುತ್ತದೆ, ಎಂದು ನಿಶ್ಚಯಿಸಿದರು ಗಿಡಗಳನ್ನು ಕಡಿಯುವಂತೆ ಆಜ್ಞೆ ಮಾಡಿದರು.
ರಾಜಾಜ್ಞೆಯಂತೆ ಎಲ್ಲವೂ ನೆರವೇರಿತು. ಆ ಸ್ಥಳವು ಬೈಲಾಯಿತು. ಅಲ್ಲಿ ಭಯಂಕರ
ಹುತ್ತು ಕಾಣಿಸಿತು. ಮತ್ತೆ ಯಾವ ಅವಶೇಷಗಳೂ ಕಂಡು ಬರಲಿಲ್ಲ. ಈ
ವಲ್ಮೀಕದಲ್ಲಿಯೇನಾದರೂ ಮಹತ್ವ ಇರಬಹುದೆಂದು ಬಾವಿಸಿ ರುದ್ರಪ್ಪನವರು ಹುತ್ತ
ವನ್ನು ಕೀಳುವಂತೆ ಆಜ್ಞೆ ಮಾಡಿದರು. ತುಸು ಸಮಯದಲ್ಲಿ ಅದು ಭಗ್ನವಾಯಿತು.
ಬಯಲಾಯಿತು. ಅಲ್ಲಿ ಹೊರ ಬಿದ್ದದ್ದು ಮನುಷ್ಯ ಗಾತ್ರದಷ್ಟು ಗುಂಡು, ಈ
ಗುಂಡಿನಲ್ಲಿರುವ ಶಕ್ತಿಯೇ ಇಷ್ಟೆಲ್ಲ ಅನಾಹುತಕ್ಕೆ ಕಾರಣವಾಗಿರಬಹುದೆಂದು ತಿಳಿ
ದನು. ಹಿಂದಿನ ರಾತ್ರಿ ವೆಂಕಟಪ್ಪ ನಾಯಕನಿಗೆ ಕನಸಿನಲ್ಲಿ ಕಂಡದ್ದು ಇಂದು ರುದ್ರ
ಪ್ಪನವರ ನೆನಪಿನಲ್ಲಿ ಹೊಳೆಯಿತು. ಹೊಳಪಿನ ಬೆಳಕಿನಲ್ಲಿ ಮಿಂಚೊಂದು ಮಿಂಚಿತು
ಆ ಮಿಂಚಿನ ಧ್ವನಿಯು ಆ ಶಿಲೆಯಲ್ಲಿ ಪ್ರಕಾಶಿಸಿತು. ಪ್ರಕಾಶದಲ್ಲಿ ಮೂರ್ತಿ ಆವಿ
ರ್ಭವಿಸಿತು. ರಾಮಧ್ಯಾನದಲ್ಲಿ ಮಗ್ನವಾಗಿದ್ದ ಮಾರುತಿಯ ಆಕೃತಿಯನ್ನು ನಿಷ್ಠೆ
ಯವರು ದಿವ್ಯ ದೃಷ್ಟಿಯಿಂದ ನೋಡಿದರು. ತನ್ಮಯರಾದರು. ಎಚ್ಚರಾಗುವಷ್ಟರಲ್ಲಿ
ಸ್ವಪ್ನವು ಮಾಯವಾಗಿತ್ತು. ಮುಂದೆ ಕಂಡದ್ದು ಅದೇ ಗುಂಡು. ಮಾರುತಿಯ ದರ್ಶನ

# ವಿಚಾರ ದೀಪ್ತಿ

— ಶ್ರೀ ಸಿದ್ಧಯ್ಯ ಪುರಾಣಿಕ

ಜೀವಿಗಳಿಗೆ ಅತ್ಯಂತ ಹಿತಕರವಾದುದು ಯಾವುದೋ ಅದು "ಸತ್ಯ"ವೆಂಬ ವ್ಯಾಖ್ಯೆಯನ್ನು ಒಪ್ಪಿದೆವಾಗಿ "ಹಿತ" ವೆಂದರೇನೆಂಬುದನ್ನೀಗ ನಿರ್ಣಯಿಸಬೇಕು. ಬಹಳ ಬಳಕೆಯಲ್ಲಿರುವ ಶಬ್ಧಗಳಲ್ಲಿ "ಹಿತ" ವು ಒಂದು. "ಸರ್ವಭೂತ ಹಿತೇ ರತಃ, "ಪರಹಿತ ನಿರತಾಭವಂತು ಭೂತ ಗಣಾಃ, "ಸರ್ವ ಭೂತೇಷು ಕೋ ಹಿತಃ, "ಪ್ರಜಾನಾಂಚ ಹಿತೇರತಃ, "ಹಿತಾಯ ಸರ್ವಲೋಕಾನಾಂ" ಇತ್ಯಾದಿ ಉಕ್ತಿಗಳಲ್ಲಿ ಉಕ್ತವಾಗಿರುವ "ಹಿತ" ಶಬ್ದ ಅತ್ಯಂತ ವ್ಯಾಪಕಾರ್ಥವನ್ನು ಒಳಗೊಂಡಿರುವ ಶಬ್ದಗಳಲ್ಲಿ ಒಂದು ಸ + ಹಿತವಾದುದೇ ಸಾಹಿತ್ಯವೆಂದು ಹೇಳಲಾಗಿದೆ. "ಹಿತರೂಪಮಿದು ಅಹಿತ ಪ್ರಕಾರಮಿದು" ಎಂಬುದನ್ನು ಕವಿವರರ ಕಾವ್ಯ ಅರುಹ ಬೇಕೆಂದಿದ್ದಾನೆ ನೃಪತುಂಗ. ಹಿತವಾವುದು ಹಾಗಾದರೆ ? "ಯಾರು ಹಿತವರು ನಿನಗೆ ? "ಎಂಬ ಪ್ರಶ್ನೆಗೆ ಮೊದಲು "ಯಾವುದು ಹಿತ ? "ಎಂಬ ಪ್ರಶ್ನೆಗೆ ಉತ್ತರ ಹುಡುಕೋಣ.

ಪ್ರತಿಯೊಬ್ಬ ಮಾನವನೂ ಸಹಜವಾಗಿ, ಸ್ವಾಭಾವಿಕವಾಗಿ ಕೆಲವು ವಸ್ತುಗಳತ್ತ ಆಕರ್ಷಿಸಲ್ಪಡುತ್ತಾನೆ; ಕೆಲವು ವಸ್ತುಗಳಿಂದ ವಿಕರ್ಷಿಸಲ್ಪಡುತ್ತಾನೆ. ಈ ಆಕರ್ಷಣೆ ವಿಕರ್ಷಣೆಗಳ ಕಾರಣ ಮೀಮಾಂಸೆಗೆ ಕಾಲ ಸಾಲದಿಲ್ಲ. ಆದರೆ "ಆಕರ್ಷಕವಾಗಿರುವುದೆಲ್ಲಿ ಹಿತಕರವಾದುದೆ ? ವಿಕರ್ಷಕವಾದುದೆಲ್ಲ ಅಹಿತಕರವಾದುದೆ ?, ಎಂಬ ಪ್ರಶ್ನೆಯನ್ನಿಲ್ಲಿ ಎತ್ತಲೇಬೇಕು. ಹಿತಾಹಿತಗಳ ನಿರ್ಣಯಕ್ಕೆ ಈ ಪ್ರಶ್ನೆಗೆ ದೊರೆಯುವ ಉತ್ತರ ಸಹಕಾರಿಯಾದೀತು.

ತೋರಿಕೆಯಲ್ಲಿ ಆಕರ್ಷಕವಾದುದು ತಿರುಳಿನಲ್ಲಿ ಅಹಿತಕರವಾಗಿರುವುದು ಸಾಧ್ಯವಿದೆ: ತೋರಿಕೆಯಲ್ಲಿ ವಿಕರ್ಷಕವಾದುದುರ ಹುರುಳಿನಲ್ಲಿ ಹಿತಕರವಾಗಿರುವುದೂ ಸಾಧ್ಯವಿದೆ. "ಅಧರಕ್ಕೆ ಕಹಿ ಉದರಕ್ಕೆ ಸಿಹಿ" ಯಾಗಿರುವ ಬೇವೂ ಇದೆ. 'ಅಧರಕ್ಕೆ ಸಿಹಿ ಉದರಕ್ಕೆ ಕಹಿ' ಯಾಗಿರುವ ಬೆಲ್ಲವೂ ಇದೆ ಪ್ರಪಂಚದಲ್ಲಿ. ಕಣ್ಣಿಗೆ ಮೋಹಕಳಾಗಿದ್ದ ಕ್ಲಿಯೋಪಟ್ರಾಳಿಗಿಂತ ಕಣ್ಣಿಗೆ ಕುರೂಪಿಯಾಗಿ ಕಂಡ ಸಾಕ್ರಟೀಸ್ ಎಷ್ಟು ಸಹಸ್ರಪಾಲು ಹಿತಕಾರಿಯಾದ ಮನುಕುಲಕ್ಕೆಂಬುದನ್ನು ಯಾರು ಗುಣಿಸಿ ಹೇಳಬೇಕು ?

ಆದುದರಿಂದ ತೋರಿಕೆಯಲ್ಲಿ ವಿಕರ್ಷಕವಾಗಿದ್ದರೂ ಪರಿಣಾಮದಲ್ಲಿ ಒಳ್ಳೆಯ

ವಾದುದನ್ನು ಬಯಸುವುದರಲ್ಲಿ ಹಿತವಿದೆ; ತೋರಿಕೆಯಲ್ಲಿ ಆಕರ್ಷಕವಾಗಿದ್ದರೂ ಪರಿಣಾಮದಲ್ಲಿ ಅನಿಷ್ಟಕರವಾದುದನ್ನು ಕಾಮಿಸುವುದರಲ್ಲಿ ಅಹಿತವಿದೆ. ವಿಧಾತನ ಉದ್ದೇಶವೇನಿದೆಯೋ ಒಳ್ಳೆಯದಕ್ಕಿಂತ ಕೆಟ್ಟದ್ದು ಅಧಿಕ ಮೋಹಕವಾಗಿ ತೋರುತ್ತದೆ ತೆರೆಯಲ್ಲಿ: ಪುಣ್ಯಕ್ಕಿಂತ ಪಾಪ, ಸತ್ಯಕ್ಕಿಂತ ಸುಳ್ಳು, ದುಡಿತಕ್ಕಿಂತ ಮೈಗಳ್ಳತನ, ತನ್ನದಾದುದಕ್ಕಿಂತ ಅನ್ಯರದು, ಪ್ರಾಮಾಣಿಕತೆಗಿಂತ ಅಪ್ರಾಮಾಣಿಕತೆ, ಪರೋಪಕಾರಕ್ಕಿಂತ ಪರಪೀಡನ ಆಕರ್ಷಕವಾಗಿ ಕಾಣುತ್ತದೆ.

ಈ ಆಕರ್ಷಣೆಗೆ ಸೋಲುವುದರಲ್ಲಿ ಹಿತವಿಲ್ಲ; ಸೋಲದಿರುವುದರಲ್ಲಿ ಹಿತವಿದೆ. ಶೂರ್ಪನಖಿ ವಿಶ್ವಮೋಹಿನಿಯಾಗಿ ಮುಂದೆ ನಿಂತರೂ ಮನಸೋಲಲಿಲ್ಲ ಲಕ್ಷ್ಮಣ. ಅವನಿಂದ ಕಿವಿ ಮೂಗು ಕೊಯ್ಸಿಕೊಂಡೂ ಶೂರ್ಪನಖಿ ಸತ್ತಿಲ್ಲ. ಅವಳ ಅಪವಿತ್ರ ಕಾಮನೆ ಹಲವು ರೂಪಗಳಲ್ಲಿ ಇಂದಿಗೂ ಬದುಕಿದ್ದು ಹೊರ ಮಿಂಚಿನಿಂದ ನಮ್ಮನ್ನು ಆಕರ್ಷಿಸುತ್ತಲೇ ಇದೆ. ಈ ಆಕರ್ಷಣೆಗೆ ಸೋಲುವುದರಲ್ಲಿ ಹಿತವಿಲ್ಲ; ಸೋಲದಿರುವುದರಲ್ಲಿ ಹಿತವಿದೆ.

ಆದಮ್ ಬಯಸಿದ ನಿಷಿದ್ಧ ಫಲದ ಜೊತೆಗೆ ಶಬರಿಯು ಕಾದ ಹಣ್ಣುಗಳೂ ಇವೆ ಈ ವಿಶ್ವದಲ್ಲಿ. ನಿಷಿದ್ಧ ಫಲ ಎಷ್ಟೇ ಮೋಹಕವಾಗಿದ್ದರೂ ಆದಮ್ ಬಯಸಬಾರದಾಗಿದ್ದಿತು ಅದನ್ನು. ಬಯಸಿ ಪತಿತನಾದನವನು. ಸಾಮಾನ್ಯ ದೃಷ್ಟಿಗೆ ಶಬರಿಯು ಕಾದ ಹಣ್ಣುಗಳು ಎಷ್ಟೇ ವಿಕರ್ಷಕವಾಗಿ ತೋರಿದರೂ ಶ್ರೀರಾಮನ ದೃಷ್ಟಿಗೆ ಅಮೃತ ಫಲಗಳಾಗಿ ತೋರಿದುವು ಅವು. ಅಲ್ಲಿ ಬಾಹ್ಯಾಕರ್ಷಣೆಗೆ ಸೋತದ್ದು ಅಹಿತವಾದರೆ ಇಲ್ಲಿ ಬಾಹ್ಯ ವಿಕರ್ಷಣೆಗೆ ಸೋತಿದ್ದರೆ ಅಹಿತವಾಗುತ್ತಿತ್ತು.

ಆದುದರಿಂದ ತೋರಿಕೆ ಏನನ್ನೇ ತೋರಲಿ, ಅದರ ತಿರುಳನ್ನು, ಪರಿಣಾಮರಮಣೀಯತೆಯನ್ನು ಗುಣಾವಗುಣಗಳನ್ನು ನೋಡಿ ಕಾಮಿಸುವುದರಲ್ಲಿ ಹಿತವಿದೆ, ನೋಡದೆ ಕಾಮಿಸುವುದರಲ್ಲಿ ಅಹಿತವಿದೆಯೆಂದು ಸ್ಥೂಲವಾಗಿ ಹೇಳಬಹುದು.

ಸ್ವಹಿತದ ಇತ್ಯರ್ಥವಾದ ಮೇಲೆ ಪರಹಿತದ ಪರಿಕಲ್ಪನೆ ಸುಲಭ. ತನಗೆ ಬೇಕಾದುದು ಪರರಿಗೆ ಬೇಡವೆಂಬುದು ಪರಹಿತವಲ್ಲ; ತನಗೆ ಬೇಡವಾದುದು ಪರರಿಗೆ ಬೇಕೆಂಬುದು ಪರಹಿತವಲ್ಲ; ತನ್ನಂತೆ ಪರರ ಬಗೆವುದು ಪರಹಿತ.

“ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್” ಮತ್ತು “ಯದ್ಯದಾತ್ಮನಿ ಇಚ್ಛೇತ ತತ್ಪರಸ್ಯಾಪಿ ಚಿಂತಯೇತ್” “ಇದು ಪರಹಿತದ ಸುವರ್ಣ ಸೂತ್ರ” ಪರಿಣಾಮದಲ್ಲಿ ಹಿತವಾದುದನ್ನು ನಾವೂ ಬಯಸೋಣ, ಬೇರೆಯವರಿಗಾಗಿಯೂ ಬಯಸೋಣ.

# ರಷ್ಯಾದಲ್ಲಿ ಭಾರತದ ಪ್ರಾಚೀನ ಗ್ರಂಥಗಳ ಬಗೆಗೆ ಆಸಕ್ತಿ

**ಶ್ರೀ. ಟಿ. ಎಸ್. ಅನಂತರಂಗಾಚಾರ**

ಗಾಂಧೀ ಶಾಂತಿ ಪ್ರತಿಷ್ಠಾನ ಕೇಂದ್ರ, ಗುಲಬರ್ಗಾ.

ವಿಶ್ವ ಸಂಸ್ಕೃತಿಯನ್ನು ಬೆಳೆಯಿಸಿರುವ ಮಹಾ ಶಕ್ತಿಗಳಲ್ಲಿ ಭಾರತೀಯ ಪ್ರಾಚೀನ ಸಾಹಿತ್ಯದ ಸ್ಥಾನ ಬಹಳ ಮಹತ್ವದ್ದಾಗಿದೆ. ಭಾರತದ ಅತಿ ಪ್ರಾಚೀನವೂ ಸಮೃದ್ಧವೂ ಆದ ಮಹಾ ಜನತೆಯ ದರ್ಶನ, ತತ್ತ್ವ ಮತ್ತು ಭಾವಮಯ ಲೋಕದ ಚಿಂತನೆ ಸಾಧನೆಗಳು ಕೇವಲ ತನ್ನ ಸೀಮಾಂತ ಪರಿಸೀಮೆಯಲ್ಲೇ ನಿಂತಿರದೆ ಹಿಂದಿನ ಕಾಲಿದಿಂದಲೂ ತನ್ನ ನೆರೆ ರಾಷ್ಟ್ರಗಳಿಗೂ ಹಬ್ಬಿ ತನ್ನ ಪರಿಮಳ ದಿವ್ಯವನ್ನು ಬೀಸಿ ಪಾವನಗೊಳಿಸಿದೆ. ನಮ್ಮ ಭಾರತದ ಬಹಳ ಮಹತ್ವಪೂರ್ಣವಾದ ಗ್ರಂಥಗಳೂ ಸಾಹಿತ್ಯವೂ ವಿಶ್ವದ ಇತರ ರಾಷ್ಟ್ರಗಳಲ್ಲಿ ಹಿಂದಿನಿಂದಲೂ ಹರಡಿ ಜ್ಞಾನ ಲೋಕಕ್ಕೆ ನೀಡಿರುವ ಕಾಣಿಕೆಯ ಕಥೆ ಸೊಗಸಾದ ಸುರಮ್ಯ ಕಥೆ. ಭಾರತದ ಅರ್ವಾಚೀನ ಮತ್ತು ಪ್ರಾಚೀನ ಸಾಹಿತ್ಯ ವೈಭವಗಳು ನಿಜವಾಗಿಯೂ ವಿಶ್ವ ಸಂಸ್ಕೃತಿಯ ಪವಿತ್ರವಾದ ಪ್ರಮುಖವಾದ ಸಿದ್ಧಿ ಶಿಖರಗಳೆನ್ನಬಹುದು.

ಹನ್ನೊಂದನೆಯ ಶತಮಾನದಲ್ಲೇ ಭಾರತದ ಸಂಸ್ಕೃತ ಭಾಷೆಯ ಪಂಚತಂತ್ರದ ಕತೆಗಳು ರಷ್ಯನ್ ಭಾಷೆಯ ಮೇಲೆ ತುಂಬಾ ಪ್ರಭಾವವನ್ನು ಬೀರಿದವು. ಬೌದ್ಧ ಧರ್ಮದ ಜಾತಕ ಕತೆಗಳ ತಂತ್ರ, ರೀತಿಗಳು ರಷ್ಯನ್ ಭಾಷೆಯ ಮೇಲೆ ಈಗಲೂ ಸಾಕಷ್ಟು ಪ್ರಭಾವವನ್ನು ಬೀರಿವೆ. "ದರ್ಶನದ ಕಣಜ ಭಾರತ. ಅದು ರಷ್ಯಾದ ಜನತೆಗೆ ನೀಡಿರುವ ದೇಣಿಗೆ ಎಂದೆಂದಿಗೂ ತೀರಲಾರದಂಥ ಅನುರ ಭಂಡಾರ. ವಿಶ್ವ ಸಾಹಿತ್ಯವಂತೂ ಭಾರತಕ್ಕೆ ಚಿರಋಣಿ"—ಎಂದು ವಿಶ್ವ ವಿದ್ಯಾಲಯದ ಪ್ರಾಧ್ಯಾಪಕ ಎಸ್. ಎಫ್. ಓಲಡನ್‌ಬರ್ಗ ಎಂಬ ರಷ್ಯನ್ ವಿದ್ವಾಂಸರು ೧೯೧೯ ರಲ್ಲಿ ಬರೆದ ಬೃಹತ್ ಗ್ರಂಥವೊಂದರಲ್ಲಿ ಉಲ್ಲೇಖಿಸಿದ್ದಾರೆ.

ಭಾರತದ ಪ್ರಾಚೀನ ಗ್ರಂಥಗಳು ಮೊದಲು ರಷ್ಯನ್ ಭಾಷೆಯಲ್ಲಿ ಯುರೋಪಿಯನ್ ಭಾಷೆಗಳಿಂದ ಪುನರನುವಾದ ಆಗಿ ಬಂದದ್ದು ೧೮ನೆಯ ಶತಮಾನದಲ್ಲಿ ರಷ್ಯಾದವರಿಗೆ ಭಾರತದ ಪ್ರಾಚೀನ ಗ್ರಂಥಗಳ ಬಗ್ಗೆ ಇರುವ ಕುತೂಹಲ ಕೆಳಕಳಿ ಇವುಗಳಿಂದ ತಿಳಿಯುತ್ತದೆ.

೧೭೮೮ ರಲ್ಲಿ ಎ. ಎ. ಪೆಟ್ರೋವ್ ಎಂಬ ಲೇಖಕರು ಇಂಗ್ಲಿಷ್ ಭಾಷೆಯಲ್ಲಿ ತರ್ಜುಮೆಯಾಗಿದ್ದ ಭಗವದ್ಗೀತೆಯನ್ನು ರಷ್ಯನ್ ಭಾಷೆಗೆ ತರ್ಜುಮೆ ಮಾಡಿದರು. ೧೭೯೨ ರಿಂದ ೧೮೦೨ ರ ವರೆಗೆ ದೀರ್ಘಕಾಲ ಸತತ ಅಧ್ಯಯನ ಮಾಡಿ ಜರ್ಮನ್ ಭಾಷೆಯಿಂದ ರಷ್ಯನ್ ಭಾಷೆಗೆ ಪ್ರಸಿದ್ಧ ಇತಿಹಾಸಕಾರರೂ ಪೆಸರಾಂತ ಸಾಹಿತಿಗಳೂ ಆದ ಎನ್. ಎಂ. ಕರೋಂಜಿನ್‌ರವರು ಕಾಳಿದಾಸನ ಶಾಕುಂತಲ ನಾಟಕವನ್ನು ಅನುವಾದಮಾಡಿ ಪ್ರಕಟಿಸಿದರು.

೧೮೪೪ ರಲ್ಲಿ ವಿ. ಎ. ಝುಕೋವಿಸ್ಕಿ ಎಂಬ ರಷ್ಯನ್ ಕವಿ ನಳದಮಯಂತಿಯ ಕಥೆಯನ್ನು ಮಹಾಭಾರತದಿಂದ ಆಯ್ದು ರಷ್ಯನ್ ಭಾಷೆಗೆ ಭಾಷಾಂತರಮಾಡಿ ಪ್ರಸಿದ್ಧಪಡಿಸಿದರು. ನಳ ದಮಯಂತಿ ಕಥೆ ಮಹಾಭಾರತದಿಂದ ರಷ್ಯನ್ ಭಾಷೆಗೆ ಭಾಷಾಂತರವಾದಾಗ ರಷ್ಯನ್ ಭಾಷೆಯ ಕಾವ್ಯ ಲೋಕದಲ್ಲೇ ಅದಕ್ಕೆ ಬಹಳ ಮಹತ್ವದ ಸ್ಥಾನ ದೊರೆತದ್ದು ಬಹಳ ಗಮನಾರ್ಹವಾದ ಸಂಗತಿ.

ಕವಿ ಸಾಹಿತಿ ಕೆ. ಬಾಲ್ಮೊಂಟ್ ರಷ್ಯನ್ ಭಾಷೆಗೆ ೧೯೧೩ ರಲ್ಲಿ ಅಶ್ವ ಘೋಷನ ಕೃತಿಗಳ ಬಗ್ಗೆ ಬೃಹತ್ ಗ್ರಂಥವನ್ನೇ ಅನುವಾದ ಮಾಡಿ ಪ್ರಕಟಿಸಿದರು. ೧೯೧೬ ರಲ್ಲಿ ಕಾಳಿದಾಸನ ಕೃತಿಗಳನೇಕವನ್ನು ಭಾಷಾಂತರಿಸಿ ಪ್ರಕಟಿಸಿದ ಕೀರ್ತಿ ಇವರಿಗೇ ಸಲ್ಲುತ್ತದೆ.

ಗೀತಗೋವಿಂದ, ಲಲಿತ ವಿಸ್ತಾರ, ಘಟಕರಪಾರ ಮೊದಲಾದ ಸಂಸ್ಕೃತ ಕೃತಿಗಳ ಬಗ್ಗೆ ಆಳವಾದ ಸಂಶೋಧನೆ ಮಾಡಿ ಅವೆಲ್ಲವೂ ರಷ್ಯನ್ ಭಾಷೆಯಲ್ಲಿ ಪ್ರಕಟವಾಗಲು ಪಿ. ನೈ. ಪೆಟ್ರೋವ್‌ರವರು ಅಪಾರವಾದ ಸೇವೆ ಸಲ್ಲಿಸಿದ್ದಾರೆ.

ಸೋಮದೇವನ ಕಥಾಸರಿತ್ಸಾಗರ, ಮಹಾಭಾರತ, ಋಗ್ವೇದದ ಪ್ರಮುಖವೆನ್ನಿಸಿದ ಭಾಗಗಳನ್ನು ೧೮೫೪ ರಿಂದ ೧೮೮೩ ರ ವರೆಗೆ ಕೆ. ಎ. ಕೊಸೊವಿಚ್‌ರವರು ರಷ್ಯನ್ ಭಾಷೆಗೆ ಉತ್ತಮ ಅನುವಾದ ಮಾಡಿದ್ದಾರೆ

೧೮೭೯ ರಲ್ಲಿ ಓ. ಬೋತ್ಲಿಂಗ್‌ರವರು ರಷ್ಯನ್ ಭಾಷೆಯಲ್ಲಿ ಕಾಳಿದಾಸನ ಶಾಕುಂತಲ ನಾಟಕವನ್ನು ಅಧಿಕೃತವಾಗಿ ಪೂರ್ಣವಾಗಿ ಭಾಷಾಂತರ ಮಾಡಿ ಅದರ ಬಗ್ಗೆ ಪ್ರಶಂಸಾ ಪೂರ್ಣವಾದ ವಿಮರ್ಶೆಯನು ಬರೆದಿದ್ದಾರೆ. ಇದೇ ಲೇಖಕರು ೧೮೭೭ ರಲ್ಲಿ ಶೂದ್ರಕ ಮಹಾ ಕವಿಯ ಮೃಚ್ಛಕಟಿಕವನ್ನೂ ೧೮೮೯ ರಲ್ಲಿ ಬೃಹದಾರಣ್ಯಕ ಉಪನಿಷತ್ತನ್ನೂ ೧೮೪೪ ರಲ್ಲಿ ಛಾಂದೋಗ್ಯ ಉಪನಿಷತ್ತನ್ನೂ ಇನ್ನೂ ಇತರ ಕೆಲವು ಉಪನಿಷತ್ತುಗಳನ್ನೂ ರಷ್ಯನ್ ಭಾಷೆಯಲ್ಲಿ ಪ್ರಕಟಿಸಿದ್ದಾರೆ. ಈ ಮಹಾ ವಿದ್ವಾಂಸರು ಬೋಪದೇವ ಮತ್ತು ಪಾಣಿನಿಯ ವ್ಯಾಕರಣ

ಗ್ರಂಥಗಳನ್ನೂ ೧೮೮೪ ರಿಂದ ೧೮೮೭ ರ ವರೆಗೆ ಪ್ರಕಟಿಸಿದ್ದಾರೆ. ಹೇಮಚಂದ್ರನ ಎಲ್ಲ ಕೃತಿಗಳನ್ನೂ ರಷ್ಯನ್ ನುಡಿಯಲ್ಲಿ ಅನುವಾದ ಮಾಡಿದ್ದಾರೆ. ಹಿತೋಪದೇಶವನ್ನೂ ಪ್ರಾಚೀನ ಸಂಸ್ಕೃತದ ಮೂರು ಮಹಾ ಸಂಪುಟಗಳನ್ನೂ ರಷ್ಯನ್ ಭಾಷೆಗೆ ಈ ಮಹಾನುಭಾವರು ಅನುವಾದ ಮಾಡಿದ್ದಾರೆ.

ಬುದ್ಧ ಧರ್ಮದ ಪ್ರತಿ ಮೋಕ್ಷ ಸೂತ್ರವನ್ನೂ ಮಹಾವ್ಯುತ್ಪತ್ತಿ ಎಂಬ ಗ್ರಂಥವನ್ನೂ ಐ. ಪಿ. ಮಿನಯೇವ್ ರಷ್ಯನ್ ಭಾಷೆಗೆ ಅನುವಾದಿಸಿದ್ದಾರೆ.

ಸಾಮವೇದದ ಬಗ್ಗೆ ಆಳವಾದ ಅಧ್ಯಯನ ಸಂಶೋಧನೆಯನ್ನು ಎಫ್. ಎಫ್. ಫಾರ್ಚುನಟೋವ್‌ರವರು ಮಾಡಿ ೧೮೭೫ ರಲ್ಲಿ ರಷ್ಯನ್ ಭಾಷೆಗೆ ತರ್ಜುಮೆ ಮಾಡಿದ್ದಾರೆ.

ಗೃಹ್ಯ ಸೂತ್ರಗಳನ್ನು ಕುಡ್ರಿಯಾವ್ಸ್ಕಿಯವರು ೧೮೯೯ ರಲ್ಲಿ ರಷ್ಯನ್ ಭಾಷೆಯಲ್ಲಿ ಬರೆದಿದ್ದಾರೆ.

ದಂಡಿಯ ಮಹಾ ಕಾದಂಬರಿಯಾದ ದಶಕುಮಾರ ಚರಿತೆಯನ್ನು ೧೯೨೩ ರಿಂದ ೧೯೨೬ ರ ವರೆಗೆ ಪಿ. ಜಿ. ರಿಟ್ಟರ್‌ರವರು ರಷ್ಯನ್ ಭಾಷೆಯಲ್ಲಿ ಬರೆದು ಪ್ರಕಟಿಸಿದ್ದಾರೆ. ಕಾಳಿದಾಸನ ದಿವ್ಯಕೃತಿ ಮೇಘದೂತವನ್ನೂ ರಷ್ಯನ್ ಭಾಷೆಯಲ್ಲಿ ಅದ್ಭುತವಾದ ರೀತಿಯಲ್ಲಿ ರಿಟ್ಟರ್‌ರವರೇ ೧೯೧೪ ರಲ್ಲಿ ಪ್ರಕಟಿಸಿದ್ದಾರೆ.

ಜೈನಕವಿ ಅಮಿತಗತಿಯ ಧರ್ಮಪರೀಕ್ಷೆ ಎಂಬ ಜೈನ ಧರ್ಮಗ್ರಂಥವನ್ನೂ ದಿಗ್ನಾಗನ ನ್ಯಾಯ ಪ್ರವೇಶವನ್ನೂ ೧೯೨೬ ರಲ್ಲಿ ರಿಟ್ಟರ್ ರಷ್ಯನ್ ಭಾಷೆಗೆ ಅನುವಾದ ಮಾಡಿ ಪ್ರಕಟಿಸಿದ್ದಾರೆ.

ಎಲ್ಮಾನೋವಿಚ್‌ರವರು ೧೯೧೩ ರಲ್ಲಿ ಮಾನವ ಧರ್ಮಶಾಸ್ತ್ರ ಎಂಬ ಗ್ರಂಥವನ್ನು ರಷ್ಯನ ಭಾಷೆಗೆ ತರ್ಜುಮೆ ಮಾಡಿದ್ದಾರೆ.

೧೮೯೩—೧೯೦೪ ರವರೆಗೆ ಎಸ್. ಎಫ್. ಓಲ್ಡೆನ್ ಬರ್ಗ್‌ರವರು ಜಾತಕಗಳನ್ನು ರಷ್ಯಾ ಭಾಷೆಗೆ ಅನುವಾದ ಮಾಡಿದ್ದಾರೆ.

೧೯೩೦ ರಲ್ಲಿ ಲೆನಿನ್ ಗ್ರಾಡಿನ ಕೆಲವು ಪ್ರಾಚ್ಯ ಶಾಸ್ತ್ರ ಕೋವಿದರು. ಸೆರ್ಬಾಟ್ಸ್ಕಿಯವರ ನಾಯಕತ್ವದಲ್ಲಿ ಕೌಟಿಲ್ಯನ ಅರ್ಥ ಶಾಸ್ತ್ರವನ್ನು ಅಧ್ಯಯನ ಮಾಡಿ ರಷಿಯನ್ ಭಾಷೆಯಲ್ಲಿ ಪ್ರಕಟಿಸಿದ್ದಾರೆ.

ಎಲಿಜರೆನ್ ಕೋವಾರವರು ಋಗ್ವೇದದ ಸಂಶೋಧನಾತ್ಮಕ ಪ್ರಬಂಧಗಳನ್ನು ರಷ್ಯನ್ ಭಾಷೆಯಲ್ಲಿ ೧೯೬೦ ರಲ್ಲಿ ಬರೆದಿದ್ದಾರೆ

ಬಿ. ಎಲ್. ಸ್ಮಿರನೋವ್‌ರವರು ಭಾಗವತ ಧರ್ಮದ ಬಗ್ಗೆಯೂ ಕೃಷ್ಣ ಧರ್ಮದ ಬಗ್ಗೆಯೂ ಯೋಗದ ಬಗ್ಗೆಯೂ ೧೯೫೫–೬೩ ರಲ್ಲಿ ಬರೆದಿದ್ದಾರೆ.

ಎ. ವೈ. ಸಿರಿಕಿನ್‌ರವರು ವಾತ್ಸಾಯನನ ಕಾಮ ಸೂತ್ರಗಳ ಬಗ್ಗೆ ಅಧ್ಯಯನ ಮಾಡಿ ರಷ್ಯನ್ ಭಾಷೆಯಲ್ಲಿ ಬರೆದಿದ್ದಾರೆ.

ವೈ. ಎಂ. ಅಲಿಖನೋವಾ ಎಂಬ ಮಹಿಳಾ ಲೇಖಕಿ ಆನಂದ ವರ್ಧನನ ಧ್ವನಿ ಶಾಸ್ತ್ರವನ್ನೂ ಅಭಿನವಗುಪ್ತ, ಮತಂಗ, ನಾರದ, ಸಾರಂಗದೇವ ಮೊದಲಾದವರ ಪ್ರಮುಖ ಕೃತಿಗಳನ್ನೂ ರಷ್ಯನ್ ಭಾಷೆಯಲ್ಲಿ ಅನುವಾದ ಮಾಡಿದ್ದಾರೆ.

ಶ್ರೀ ಶಂಕರಾಚಾರ್ಯರ ಆತ್ಮ ಬೋಧೆಯನ್ನು ಎ. ವೈ. ಸಿರ್ಕಿನ್‌ರವರು ರಷ್ಯನ್ ಕವಿತೆಗಳಲ್ಲಿ ಸೊಗಸಾದ ಅನುವಾದ ಮಾಡಿದ್ದಾರೆ.

ಕಣಾದನ ಸೂತ್ರಗಳನ್ನೆಲ್ಲಾ ಗೀಸ್ಕಿವಾರವರು ೧೯೬೩ ರಲ್ಲಿ ರಷ್ಯನ್ ಭಾಷೆಗೆ ಭಾಷಾಂತರ ಮಾಡಿದ್ದಾರೆ.

ಹೀಗೆ ಭಾರತದಲ್ಲಿಯ ಸಂಸ್ಕೃತದಲ್ಲಿರುವ ಪುರಾಣ, ತತ್ವ ಶಾಸ್ತ್ರ, ನಾಟಕ ಕಥೆ, ವ್ಯಾಕರಣ ಮೊದಲಾದ ಅಪಾರವಾದ ಸಾಗರದ ಅಮೃತ ರಸಪಾನವನ್ನು ರಷ್ಯನ್ ನುಡಿಯ ಮೂಲಕ ಜಗತ್ತಿನ ಪ್ರಮುಖ ರಾಷ್ಟ್ರಗಳಲ್ಲೊಂದಾದ ರಷ್ಯಾದವರು ಮಾಡುತ್ತಿರುವುದು ನಿಜವಾಗಿಯೂ ನಮ್ಮೆಲ್ಲರಿಗೂ ಅಭಿಮಾನದ ಸಂಗತಿ.

ನಾವೂ ಸಂಸ್ಕೃತ ಕೃತಿಗಳ ಬಗ್ಗೆ ಅಭಿರುಚಿ, ಅಧ್ಯಯನ, ಚಿಂತನ ಶೀಲತೆಗಳನ್ನು ಬೆಳೆಸಿಕೊಳ್ಳುವುದು ನಮ್ಮ ಕರ್ತವ್ಯವಲ್ಲವೇ ?

---

೩ ನೇ ಪುಟದಿಂದ ಬಂದುದು

## ಅಮಲಾಪುರದ ಹನುಮಂತಪ್ಪ

ದಿಂದ ಭಕ್ತಿ ಜ್ಞಾನಗಳೆರಡೂ ಮಡ್ರಪ್ಪನವರಲ್ಲಿ ಉದಯ ಹೊಂದಿದವು. ಭಯ ಭಕ್ತಿಯಿಂದ ದಂಡ ಪ್ರಣಾಮ ಮಾಡಿದರು. ನಮ್ಮ ಅರಸರ ತಪ್ಪು ಕ್ಷಮಿಸೆಂದು ಬೇಡಿಕೊಂಡರು. ಪರಿವಾರದವರಿಗೆ ಇಂಗಿ ಹೋದ ಕಂಗಳ ಕಾಂತಿಯನ್ನು ದಯ ಪಾಲಿಸೆಂದು ಸಂಜೀವ ಮೂರ್ತಿಗೆ ಸ್ತೋತ್ರ ಮಾಡಿದರು. ಸ್ಮರಣ ಮಾತ್ರದಿಂದಲೇ ಸಂಜೀವ ಮೂರ್ತಿಯು ಸಂತುಷ್ಟನಾಗಿ ಶಿಬಿರದ ಸಕಲ ಪ್ರಾಣಿಗಳಿಗೆ ಪರಿವಾರಕ್ಕೆ ನೇತ್ರಜ್ಯೋತಿಯನ್ನು ದಯಪಾಲಿಸಿದನು. ಆಗ ವೆಂಕಟಪ್ಪ ನಾಯಕನಿಗೆ ಪ್ರಾಣ ದೇವರ ಮೇಲೆ ಭಕ್ತಿ ವಿಶ್ವಾಸವುಂಟಾಯಿತು. ಆ ಸ್ಥಳಕ್ಕೆ ಹೋಗಿ ಅಷ್ಟ ವಿಧ ಅರ್ಚನೆಯಿಂದ ಮಾರುತಿಯನ್ನು ಪೂಜಿಸಿ ದೀಪ ಧೂಪ, ನೈವೇದ್ಯಗಳಂ ಸಮರ್ಪಿಸಿ, ಫಲ ಮಂತ್ರಾಕ್ಷತೆಗಳನ್ನು ತೆಗೆದುಕೊಂಡು ಪರಿವಾರದೊಡನೆ ಸುರಪುರಕ್ಕೆ ಹೋದನು.

# ಪ್ರಾಚೀನ ಭಾರತದ ವಿಶ್ವವಿದ್ಯಾನಿಲಯಗಳು

ಕೆ. ಎನ್. ರಾಜ

ಪ್ರಾಚೀನ ಭಾರತದ ಶಿಕ್ಷಣದ ಇತಿಹಾಸವನ್ನು ಕ್ರಿ. ಪೂ. ೨೦೦೦ ದಿಂದ ಕ್ರಿ. ಶ. ೧೨೦೦ ರ ವರೆಗೆ ವಿಸ್ತರಿಸಲ್ಪಡುತ್ತಿದೆ. ಈ ಅವಧಿಯ ಪ್ರಾರಂಭದಿಂದ ಕೊನೆಯ ವರೆಗೂ ಸಾಮಾಜಿಕ ಶಿಕ್ಷಣ ಪದ್ಧತಿ ಒಂದೇ ವಿಧವಾಗಿರಲಿಲ್ಲವಾದ್ದರಿಂದ ಇವನ್ನು ಕೆಳಗಿನಂತೆ ವಿಭಾಗಿಸಬಹುದು.

೧. ಕ್ರಿ. ಪೂ. ೨೦೦೦ ದಿಂದ ಕ್ರಿ. ಪೂ. ೧೦೦೦ ವರೆಗಿನ ವೈದಿಕ ಕಾಲ.
೨. ಕ್ರಿ. ಪೂ. ೧೦೦೦ ದಿಂದ ಕ್ರಿ. ಪೂ. ೨೦೦ ವರೆಗಿನ ಉಪನಿಷತ್ ಕಾಲ.
೩. ಕ್ರಿ. ಪೂ. ೨೦೦ ದಿಂದ ಕ್ರಿ. ಶ. ೫೦೦ ವರೆಗಿನ ಪೌರಾಣಿಕ ಕಾಲ

ವೇದಗಳ ಕಾಲದಲ್ಲಿ ಜನರು ಅಥವಾ ಸಮಾಜ ತೀರ ಸರಳ ಪದ್ಧತಿಯನ್ನೇ ಅನುಸರಿಸಿಕೊಂಡಿದ್ದರು. ಮೂರ್ತಿ ಪೂಜೆ ಇನ್ನೂ ತಿಳಿದಿರಲಿಲ್ಲ. ಸ್ತ್ರೀ ಪುರುಷರಿಗೆ ಸಮಾನವಾದ ಹಕ್ಕುಗಳಿದ್ದವು ಜಾತೀಯತೆಯ ಭಾವನೆ ಇನ್ನೂ ಆಕಾರ ತಳೆದಿರಲಿಲ್ಲ. ವ್ಯವಹಾರ ದೃಷ್ಟಿಯಿಂದ ಪ್ರತಿಯೊಬ್ಬನೂ ಶಿಕ್ಷಕ, ಯೋಧ, ಒಕ್ಕಲಿಗ, ಜೀನಾಯತಜ್ಞನಾಗಿರುತ್ತಿದ್ದ.

ಉಪನಿಷತ್ತುಗಳ ಕಾಲದಲ್ಲಿ ಸಮಾಜ ಕ್ರಮೇಣವಾಗಿ ಭಾಗಗಳಾಗಿ ವಿಂಗಡಿಸಲ್ಪಟ್ಟು ಪ್ರತ್ಯೇಕ ಸಂಸ್ಕೃತಿಯ ನಿರ್ಮಾಣವನ್ನೇ ಪ್ರಾರಂಭಿಸಲು ಆರಂಭವಾಯಿತು. ಇದಕ್ಕೆ ವೇದಗಳೇ ಕಾರಣವೆನಿಸಿದವು. ಇದರ ಮುಂದಿನ ಅವಧಿಯೇ 'ಧರ್ಮ ಶಾಸ್ತ್ರಾವಧಿ' ಯೆಂದು ಪ್ರಸಿದ್ಧಿಗೊಂಡು ಕಲೆ, ಸಾಹಿತ್ಯ, ಗಣಿತ ಶಾಸ್ತ್ರ, ನಾಟಕಗಳಲ್ಲಿ ನವಸ್ಫೂರ್ತಿ-ಚಟುವಟಿಕೆಯನ್ನು ಪ್ರಾರಂಭಿಸಿತು.

ಆಗ ಸಂಸ್ಕೃತವೇ ಶಾಸ್ತ್ರೀಯ ಭಾಷೆಯಾಗಿ ಪ್ರಾಕೃತವನ್ನೇ ಸಂಸರ್ಗ ಭಾಷೆಯನ್ನಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ಜಾತಪದ್ಧತಿ ಉಗ್ರವಾಗಿತ್ತು. ಸ್ತ್ರೀಗೆ ಸ್ವಾತಂತ್ರ್ಯವಿರಲಿಲ್ಲ. ಮನುವಿನ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ವಾಕ್ಯ ಇದನ್ನು ಸಮರ್ಥಿಸುತ್ತದೆ. ಸತ್ಯ ಮಾತನಾಡುವದು ಬುದ್ಧನ ಕಾಲದವರೆಗೂ ಸಮಾಜದ 'ಪಾಲಿಸಲೇ ಬೇಕಾದ ನಿಯಮಗಳಲ್ಲೊಂದಾಗಿ' ಪರಿಗಣಿಸಲ್ಪಟ್ಟು ಪಾಲಿಸಲ್ಪಡುತ್ತಿತ್ತು.

ನಾಲಂದಾ ವಿಕ್ರಮಶೀಲಾ ವಿಶ್ವವಿದ್ಯಾಲಯಗಳು ಬೌದ್ಧ-ಶಿಕ್ಷಣಾಲಯ

ಗಳಾಗಿದ್ದವು. ಅವುಗಳಲ್ಲಿ ಎಲ್ಲ ಕಾರ್ಯಗಳಿಗೂ ಉಪಯೋಗಿಸುತ್ತಿದ್ದ ಭಾಷೆ ಪಾಲಿ. ಆಗಿನ ಬಳಕೆ ಭಾಷೆಯೂ ಪಾಲಿಯೇ ಆಗಿತ್ತಲ್ಲದೇ ಬುದ್ಧನ ಉಪದೇಶಗಳೆಲ್ಲ ಪಾಲಿಯಲ್ಲಿಯೇ ಇದ್ದುದೂ ಇದಕ್ಕೆ ಕಾರಣವಾಗಿರಬೇಕು !

ಪ್ರಾಚೀನ ಭಾರತದ ಶಾಲೆಗಳಲ್ಲಿ ಶ್ರದ್ಧೆಯಿಂದ ಅಭ್ಯಾಸ ಮಾಡಲು ಬಯಸಿ ನಿರಾಶೆ ಹೊಂದಿದ ವಿದ್ಯಾರ್ಥಿಗಳೇ ಇರುತ್ತಿರಲಿಲ್ಲ. ಶಿಕ್ಷಕರೂ ಸಹ ಯಾವುದೇ ಶಿಕ್ಷಣ ನೀಡುವಾಗ ಉದ್ದೇಶ ಪೂರ್ವಕವಾಗಿ ಏನನ್ನೂ ಬಚ್ಚಿಡುತ್ತಿರಲಿಲ್ಲ. ವಿದ್ಯಾರ್ಥಿಗಳನ್ನು ವಾತ್ಸಲ್ಯದಿಂದ ಕಾಣುತ್ತ ತಮಗೆ ಗೊತ್ತಿದ್ದ ವಿದ್ಯೆಯಲ್ಲವನ್ನೂ ಧಾರೆಯೆರೆಯುತ್ತಿದ್ದರು. ಶುಕ್ರಾಚಾರ್ಯರು ತಮ್ಮ ಶಿಷ್ಯ ಕಚನಿಗೆ ಮಲಗಿದಾಗಲೂ ಪಾಠ ಹೇಳುತ್ತಿದ್ದರು. ಆದರೂ ಕಚನಿಂದಲೇ ಅವರ ಕಲೆ ಕೊನೆಗೊಂಡಿತು. ದ್ರೋಣಾಚಾರ್ಯರೂ ಸಹ ಏನನ್ನೂ ಬಚ್ಚಿಡದೇ ಎಲ್ಲವನ್ನೂ ಧಾರೆಯೆರೆದುದಕ್ಕಾಗಿಯೇ ತಮ್ಮ ಶಿಷ್ಯ ದೃಷ್ಟದ್ಯುಮ್ನನಿಂದ ಮರಣ ಹೊಂದಿದರು. ಆದರೂ ದ್ರೋಣಾಚಾರ್ಯರಿಗೆ ತಮ್ಮ ನಿಯಮವೇ ತಮ್ಮನ್ನೂ ಎಂದಾದರೂ ಒಂದು ದಿನ ಕೊಲ್ಲುತ್ತದೆ; ಎಂಬುದು ತಿಳಿದಿದ್ದರೂ. ಅವರು ಯಾವುವನ್ನೂ ಬಚ್ಚಿಟ್ಟಿರಲಿಲ್ಲ

**ಗುರುಕುಲ**

ಗುರು ಮತ್ತು ಶಿಷ್ಯರು ಒಂದಾಗಿಯೇ ಇರುತ್ತಿದ್ದರು. ತಾವಿರ್ವರೂ ಅತ್ಯಂತ ಪ್ರೇಮದಿಂದ ಇರುತ್ತಿದ್ದರು. ಅವರ ಪ್ರೇಮ ತಂದೆ ಮಕ್ಕಳ ಪ್ರೇಮದಷ್ಟೇ ಗಾಢವಾಗಿರುತ್ತಿತ್ತು. ಗುರುಕುಲದಲ್ಲಿಯ ವಿದ್ಯಾರ್ಥಿಗಳು ಗುರುಮನೆಯಲ್ಲಿಯೇ ಇರುತ್ತಿದ್ದರು. ಗುರುವಿಗೆ ಮಲಗಲು ಮಾತ್ರ ಪ್ರತ್ಯೇಕ ಕೊಠಡಿಯಿರುತ್ತಿತ್ತು. ವಿದ್ಯಾರ್ಥಿಗಳು ತಮ್ಮೆಲ್ಲ ಸೌಖ್ಯವನ್ನು ಬಿಟ್ಟುಕೊಟ್ಟು ಗುರುಕುಲಕ್ಕೆ ತಕ್ಕಂತೆ ತಮ್ಮ ಜೀವನವನ್ನು ಮಾರ್ಪಡಿಸಿಕೊಳ್ಳುತ್ತಿದ್ದರು. ಗುರುವಿನ ನಂತರವೇ ಊಟ. ಗುರುವಿನ ನಂತರವೇ ಮಲಗುವದು ಮುಂತಾಗಿ ಎಲ್ಲವನ್ನು ಗುರುವಿನ ನಂತರವೇ ಮಾಡುತ್ತಿದ್ದರಲ್ಲದೇ ಮಲಗುವ ಮುನ್ನ ಮನೆಗೆಲಸಗಳನ್ನು ಆಳಿನಂತೆ ಮಾಡುತ್ತಿದ್ದರು. ಎಂಥ ಕಠಿಣ ಪ್ರಸಂಗದಲ್ಲಿಯೂ ಗುರುಕುಲದಲ್ಲಿಯ ಜೀವನ ಅಚ್ಚುಕಟ್ಟಾಗಿ ಶಿಸ್ತಿನಿಂದ ಕೂಡಿರುತ್ತಿತ್ತು. ಅವಶ್ಯಕತೆ ಬಿದ್ದಾಗಲೂ ಸಹ ಶಿಕ್ಷಕರೂ ವಿದ್ಯಾರ್ಥಿಗಳೂ ಕೂಡಿಯೇ ಸಂತಸವಾಗಿಯೇನ ಇರುತ್ತಿದ್ದರು. ಶಿಕ್ಷಕರು ಸುಖದಿಂದಿರುತ್ತಿದ್ದರೂ ಅವರೇ ದಾರಿದ್ರ್ಯ ಜೀವನದ ಮುಂದಾಳಾಗಿರುತ್ತಿದ್ದರು: ವಿದ್ಯಾರ್ಥಿಗಳ ದುಃಖದಲ್ಲಿ ತಾವೂ ಪಾಲ್ಗೊಳ್ಳುತ್ತಿದ್ದರು. ಆಶ್ರಮದ ವಾತಾವರಣ ತೀರ ಅಪರೂಪ. ಶಿಕ್ಷೆಗಳ ಅವಶ್ಯಕತೆಯೇ ಇರಲಿಲ್ಲ. ಒಂದು ಸಲ ಮಾಡಿದ ತಪ್ಪನ್ನು ಶಿಕ್ಷಕ ವಿದ್ಯಾರ್ಥಿಗಳಾರೇ ಆಗಿರಲಿ ತಕ್ಷಣ ತಿದ್ದಿಕೊಂಡು ಮತ್ತೊಮ್ಮೆ ಅಂಥ ತಪ್ಪು ಘಟಿಸದಂತೆ ಎಚ್ಚರಿಕೆ ವಹಿಸುತ್ತಿದ್ದರು.

ಕಾರ್ಯದ ಎಲ್ಲ ಭಾಗಗಳಲ್ಲೂ ಒಂದು ನಿಯಮವಿರುತ್ತಿತ್ತು.

**ಉಚಿತ ಶಿಕ್ಷಣ**

ತಕ್ಷಶಿಲಾ, ನಾಲಂದ, ಕಾಂಚಿ, ಶ್ರೀ ಧನ್ಯಕಟಕ ವಿಕ್ರಮಶಿಲಾ ಮತ್ತು ಬನಾರಸ ವಿಶ್ವವಿದ್ಯಾಲಯಗಳಲ್ಲಿ ಶಿಕ್ಷಣವು ಸಂಪೂರ್ಣ ಉದಾರತೆಯಿಂದ ನೀಡಲ್ಪಡುತ್ತಿತ್ತಲ್ಲದೇ, ವಿದ್ಯಾರ್ಥಿಗಳು ಉಚಿತ ಊಟೋಪಚಾರ, ವಸತಿ, ವಸ್ತ್ರಗಳನ್ನು ಪಡೆಯುತ್ತಿದ್ದರು. ವಿದ್ಯಾರ್ಥಿಗಳಿಗೆ ವಿದ್ಯಾನಿಲಯಗಳು ನೀಡುವ ಖರ್ಚನ್ನು ಭರಿಸಲು ಗ್ರಾಮಸ್ಥರ ದಾನಗಳೇ ಪ್ರಮುಖ ಆದಾಯವೆನಿಸಿತ್ತು. ಈ ನಿಲಯಗಳಿಗೆ ದಾನ ನೀಡಲು ಗ್ರಾಮಸ್ಥರಲ್ಲಿ ಎಲ್ಲಿಲ್ಲದ ಸ್ಪರ್ಧೆಯೇ ನಡೆಯುತ್ತಿತ್ತು. ಸಮಾಜದಲ್ಲಿಯೇ ನಡೆಯುವ ಸ್ಪರ್ಧೆಗಳಲ್ಲಿ ಗೆದ್ದವರು ಇಂತಿಷ್ಟು ಹಣವನ್ನು ನಿಲಯಗಳಿಗೆ ಕೊಡಬೇಕೆಂದು ಮೊದಲೇ ನಿರ್ಣಯಿಸುತ್ತಿದ್ದರು. ಸೋತವರು ತಪ್ಪದೇ ವಿಶ್ವವಿದ್ಯಾಲಯಗಳಿಗೆ ದಾನ ಸಲ್ಲಿಸುತ್ತಿದ್ದರು. ಇದರಂತೆ ಮದುವೆ ಮುಂಜಿಗಳಲ್ಲಿಯೂ, ಈ ನಿಲಯಗಳಿಗೆ ಅಪಾರ ದಾನ ನೀಡುತ್ತಿದ್ದರಲ್ಲದೇ, ಶಿಕ್ಷಕರನ್ನೂ ವಿದ್ಯಾರ್ಥಿಗಳನ್ನೂ ಸಮಾರಂಭಕ್ಕೆ ಆಮಂತ್ರಿಸುತ್ತಿದ್ದರು. ಕೊಲ್ಹಾಪುರದ ಹೋಟಗಿ ಗುರುಕುಲದ ಶಿಕ್ಷಕರು ವಿದ್ಯಾರ್ಥಿಗಳನ್ನು ಈಗಲೂ ಆಮಂತ್ರಿಸುತ್ತಿರುವದು ಪ್ರಾಚೀನ ಪದ್ಧತಿಯ ಸಂಕೇತ, ಅವಶೇಷ. ಶಿಕ್ಷಕರು ಜ್ಞಾನ ನೀಡುವವರ ಜೊತೆಗೆ ವಿದ್ಯಾರ್ಥಿಗಳಿಗೆ ಸಹಾಯಕ್ಕೆಂದು ನಿಧಿಯನ್ನೂ ತಾವೇ ಸಂಗ್ರಹಿಸುತ್ತಿದ್ದರು. ಅತ್ಯಂತ ಕಠಿಣ ಪ್ರಸಂಗ ಬಂದಾಗ ತಮ್ಮ ಗುರುಕುಲಕ್ಕಾಗಿ ರಾಜನ ಬಳಿಯಲ್ಲಿಯೂ ಸಹಾಯ ಪಡೆಯುತ್ತಿದ್ದರು. ತನ್ನ ಬಳಿಗೆ ಬಂದ ಯಾವ ವಿದ್ಯಾರ್ಥಿಯನ್ನೂ ಗುರು ತಿರಸ್ಕರಿಸುತ್ತಿರಲಿಲ್ಲ. ಪ್ರತಿಯೊಬ್ಬನನ್ನೂ ಗುರುಕುಲದಲ್ಲಿ ಸೇರಿಸಿಕೊಳ್ಳುತ್ತಿದ್ದನು.

**ಶಿಕ್ಷಣ ವಿಧಾನ**

ಅವರ ಕಲಿಸುವ ವಿಧಾನ ಪ್ರಾಮುಖ್ಯವಾಗಿ ಬಾಯಿ ಮಾತಿನದೇ ಆಗಿತ್ತು. ಅವಿಭಾಜ್ಯವೂ ಆಗಿತ್ತು. ಕೇಳುವದು, ಧ್ಯಾನ, ಪಠಣೆಗಳೇ ಅಂದಿನ ಶಿಕ್ಷಣ ವಿಧಾನದ ಮುಖ್ಯ ತತ್ತ್ವಗಳಾಗಿದ್ದವು. ಆಗಿನ ಕಾಲದಲ್ಲಿ ಗ್ರಂಥಗಳು ಕಡಿಮೆ ಇದ್ದುದರಿಂದ ಪ್ರತಿಯೊಂದನ್ನು ತಕ್ಷಣ ಬಾಯಿಪಾಠ ಮಾಡಬೇಕಾಗುತ್ತಿತ್ತು. "ಪುಸ್ತಕದಲ್ಲಿಯ ಜ್ಞಾನ ಪರರಿಗೆ ಕೊಡುವ ಕೈಗಡದ ಹೊನ್ನಿನಂತೆ" ಎಂದೇ ಅವರು ದೃಢವಾಗಿ ನಂಬಿದ್ದರು.

**ತರಗತಿಗಳು** :

ಪ್ರತಿಯೊಬ್ಬ ಗುರುವಿನ ಬಳಿ ಹದಿನೈದರಿಂದ ಇಪ್ಪತ್ತರ ವರೆಗೆ ವಿದ್ಯಾರ್ಥಿ

ಗಳು ಇರುತ್ತಿದ್ದುದರಿಂದ ಯಾವ ವಿಷಯವನ್ನು ಕಲಿಸಿದರೂ ಒಂದೇ ದಿನದಲ್ಲಿ ಕಲಿತು ಬಿಡಬಹುದಾಗಿತ್ತು. ಪ್ರತಿ ಪಾಠವನ್ನು ವಿದ್ಯಾರ್ಥಿಗಳು ಪೂರ್ತಿ ಒಪ್ಪಿಸುವ ವರೆಗೆ ಬೇರೆ ಪಾಠವನ್ನು ಹೇಳುತ್ತಿರಲಿಲ್ಲ. ಒಂದೊಂದು ಸಲ ಒಬ್ಬೊಬ್ಬ ವಿದ್ಯಾರ್ಥಿ ಉಳಿದರೂ ಬೇರೆ ಪಾಠವನ್ನು ಹೇಳುತ್ತಿರಲೇ ಇಲ್ಲ.

ಶಿಕ್ಷಕರು ಹಳೆಯ ವಿದ್ಯಾರ್ಥಿಗಳಿಗೆ ನಿಯಮಿತ ವೇಳೆಯಲ್ಲಿ ಮಾತ್ರ ಪಾಠ ಹೇಳುತ್ತಿದ್ದರು. ನಂತರ ಉಳಿದ ವೇಳೆಯಲ್ಲಿ ಹಳೆಯ ವಿದ್ಯಾರ್ಥಿಗಳು ಹೊಸ ವಿದ್ಯಾರ್ಥಿಗಳಿಗೆ ಕಲಿಸುತ್ತಿದ್ದರು. ಕೆಲವು ಸಲ ಹೆಚ್ಚಿನ ತರಗತಿಯ ವಿದ್ಯಾರ್ಥಿಗಳೂ ಇದಕ್ಕೆ ನೆರವಾಗುತ್ತಿದ್ದರು. ಈ ಪದ್ಧತಿಯು ಕಡಿಮೆ ವಿದ್ಯಾರ್ಥಿಗಳು, ಕಡಿಮೆ ವಿಷಯಗಳು ಇದ್ದಲ್ಲಿ ಮಾತ್ರ ಸಾಧ್ಯವಾಗುತ್ತಿತ್ತು. ಇದರಿಂದ ಆಗಿನ ಕಾಲ 'ಕಲಿಯುತ್ತಲೇ ಕಲಿಸುವ ಕಾಲ'ವೂ ಆಗಿತ್ತು. (ಈ ಪದ್ಧತಿ ಗದಗಿನ 'ವೀರೇಶ್ವರ ಪುಣ್ಯಾಶ್ರಮ' ದಲ್ಲಿ ಈಗಲೂ ಇದೆ.) ಈ ಪದ್ಧತಿಯಿಂದ ವಿದ್ಯಾರ್ಥಿ ವಿದ್ಯಾರ್ಥಿಗಳಲ್ಲಿ ಗೌರವ ಭಾವನೆ ಹುಟ್ಟುವದೆಂಬುದೂ ನಿರ್ವಿವಾದ.

**ನಾಲಂದಾ ನಿಲಯ :**

ಕ್ರಿ. ಶ. ೬೭೩ ರಿಂದ ೬೪೭ ರ ವರೆಗೆ ಭಾರತದಲ್ಲಿ ಸಂಚರಿಸಿದ ಹುಯೇನ್‌ತ್ಸಾಂಗನು ನಾಲಂದಾ ವಿಶ್ವವಿದ್ಯಾಲಯದಲ್ಲಿ ೧೦ ವರ್ಷಗಳ ಕಾಲ ಅಧ್ಯಯನಿಸಿ, ಬುದ್ಧನ ಗ್ರಂಥಗಳನ್ನೆಲ್ಲ ಪ್ರತಿ ಮಾಡಿಕೊಂಡ. ಅವನ ಅಭಿಪ್ರಾಯದಂತೆ 'ವಿಶ್ವವಿದ್ಯಾಲಯವು ಧರ್ಮಗಂಜ ಎಂಬಲ್ಲಿದ್ದು ರತ್ನಸಾಗರ, ರತ್ನದಂಡಿ, ರತ್ನರಂಜಕಗಳೆಂಬ ಮೂರು ಭವ್ಯ ಕಟ್ಟಡಗಳಿಂದ ಕೂಡಿತ್ತು. ಇವುಗಳ ಹೊರಗಿನ ಮಧ್ಯದ ಕಟ್ಟಡ ಒಂಬತ್ತು ಅಂತಸ್ತುಗಳಿಂದ ಕೂಡಿದ ಗ್ರಂಥಾಲಯವಾಗಿತ್ತು. ಉಳಿದವುಗಳೆಲ್ಲದರಲ್ಲಿ ಎಂಟು ಸಭಾಂಗಣಗಳೂ ೩೦೦ ಕೋಣೆಗಳೂ ಇದ್ದವು. ಭೋಜನ ಶಾಲೆ ಸಾಧಾರಣವಾಗಿತ್ತು. ಪ್ರತಿಯೊಂದು ಕೋಣೆಯೂ ಉತ್ತಮವಿದ್ದು ಒಂದು ಕೋಣೆಯಲ್ಲಿ ಒಬ್ಬರಾಗಲೀ, ಇಬ್ಬರಾಗಲೀ ಇರುತ್ತಿದ್ದರು. ವಿದ್ಯಾರ್ಥಿಗಳು ಎತ್ತರವಾದ ಕಲ್ಲುಗಳ ಮೇಲೆ ಮಲಗುತ್ತಿದ್ದರು. ದೀಪಗಳನ್ನಿಡಲು ಸಹ ಗೂಡುಗಳಂತೆ ಅಲ್ಪ ಜಾಗ ಮಾಡಿಕೊಡಲಾಗಿತ್ತು.

**ಪ್ರವೇಶ :**

ಕ್ರಿ. ಶ. ಎರಡನೆಯ ಶತಮಾನದಲ್ಲಿ ಈ ವಿಶ್ವವಿದ್ಯಾನಿಲಯಗಳಲ್ಲಿ ಪ್ರವೇಶ ದೊರಕಿಸಲು ಭಾರೀ ಜನದಟ್ಟಣೆಯಿತ್ತು. ಆಗ ಪ್ರವೇಶ ನೀಡುವಾಗಲೂ ಮೂರರಿಂದ ಒಬ್ಬರು ಉತ್ತರವರೆಗಿನ ವಿದ್ಯಾರ್ಥಿಗಳಿಗೆ ಮಾತ್ರ ಪ್ರವೇಶ ಕೊಡಲಾಗುತ್ತಿತ್ತು: ಇದೇ

ಪದ್ಧತಿ ಒಂಬತ್ತನೆಯ ಶತಮಾನದ ವರೆಗೂ ಬೆಳೆದು ಬಂದಿತ್ತು. ಶಿಕ್ಷಣ ಸಂಸ್ಥೆಗಳು ವಿದ್ಯಾರ್ಥಿಗಳಿಂದ ಭೂಮಿ ಹಾಗೂ ಹಣದ ನೆರವನ್ನು ಪಡೆಯುತ್ತಿದ್ದವು.

ಈ ವಿಶ್ವವಿದ್ಯಾನಿಲಯಗಳ ರಕ್ಷಣೆಗಾಗಿ ಸುಮಾರು ಎರಡುನೂರು ಹಳ್ಳಿಗಳನ್ನು ಆಗಿನ ಗುಪ್ತ ಅರಸರು ದಾನವಾಗಿ ಕೊಟ್ಟಿದ್ದರು. ಅದಕ್ಕಾಗಿಯೇ ಈ ವಿಶ್ವವಿದ್ಯಾನಿಲಯಗಳು ಬೌದ್ಧ ಶಿಕ್ಷಣಾಲಯಗಳಾಗಿದ್ದವು.

**ಪ್ರಖ್ಯಾತಿ :**

ಭಾರತದ ವಿಶ್ವವಿದ್ಯಾಲಯಗಳಿಗೆ ದೂರ ದೂರದ ದೇಶಗಳಿಂದಲೂ ವಿದ್ಯಾರ್ಥಿಗಳು ಬರುತ್ತಿದ್ದರು. ಚೀನಾ, ತಿಬೇಟ, ಜಾವಾ. ಸುಮಾತ್ರಾ. ಕೊರಿಯಾ, ಗ್ರೀಸ್, ಇರಾಣ, ಅರೇಬಿಯ, ಮುಂತಾದ ದೇಶಗಳಲ್ಲಿಂದ ವಿದ್ಯಾರ್ಥಿಗಳು ಬಂದು ತಮ್ಮ ಜ್ಞಾನದಾಹವನ್ನು ಈಡೇರಿಸಿಕೊಳ್ಳುತ್ತಿದ್ದರು. ಹತ್ತು ವರ್ಷಗಳವರೆಗೆ ಅಧ್ಯಯನ ನಡೆಸಿ ತರ್ಕಶಾಸ್ತ್ರ ವೈದ್ಯಶಾಸ್ತ್ರ, ಜ್ಯೋತಿಷ್ಯ ಶಾಸ್ತ್ರಗಳಲ್ಲಿ ಪ್ರಾವೀಣ್ಯತೆ ಪಡೆಯುತ್ತಿದ್ದರು. ಸಾರಿಗೆ ಸಾಧನಗಳು ಕಠಿಣವಿದ್ದರೂ ಭಾರತದ ವಿಶ್ವವಿದ್ಯಾಲಯಗಳು ದೂರ ದೂರದ ವಿದೇಶೀಯರನ್ನು ಆಕರ್ಷಿಸುತ್ತಿದ್ದವೆಂದು ಸ್ಪಷ್ಟವಾಗುತ್ತದೆ. ಇಲ್ಲಿ ಒಬ್ಬ ಸನ್ಯಾಸಿ ಮುಖ್ಯನಾಗಿದ್ದು ಉಳಿದ ಶಿಕ್ಷಕರೆಲ್ಲ ಭಿಕ್ಷುಗಳಾಗಿದ್ದರು. ಸಂಸ್ಕೃತ ಕಡ್ಡಾಯ ಭಾಷೆಯಾಗಿದ್ದುದೂ ಇದರ ಪ್ರಖ್ಯಾತಿಗೆ ಕಾರಣವಾಗಿತ್ತು.

ಈ ವಿಶ್ವ ವಿದ್ಯಾಲಯಗಳ ಮಟ್ಟವನ್ನು ಅವುಗಳಲ್ಲಿದ್ದ ಪ್ರಸಿದ್ಧ ವಿದ್ವಾಂಸರಿಂದಲೂ ಅರಿತುಕೊಳ್ಳಬಹುದು. ವೈದ್ಯಶಾಸ್ತ್ರದಲ್ಲಿ ಪ್ರವೀಣನಾಗಿದ್ದ ಜೀವಕ ತಕ್ಷಶಿಲೆಯಲ್ಲಿ ಇದ್ದನು. ತನ್ನ ದೀರ್ಘಾವಧಿಯ ನಂತರ ವಿಶ್ವವಿದ್ಯಾಲಯದಿಂದ ನಿವೃತ್ತನಾದಾಗ ಆತ "ನಾಕಷ್ಟು ಜ್ಞಾನಕ್ಕಿಂತಲೂ ನನಗಿರುವ ಜ್ಞಾನ ತೀರಾ ಕಡಿಮೆ" ಎಂದು ಹೇಳಿಕೊಳ್ಳುತ್ತಿದ್ದ.

ಆಗಿನ ದಿನಗಳಲ್ಲಿ ತಾಂತ್ರಿಕ ಜ್ಞಾನಕ್ಕೊಂದಕ್ಕೇ ಗೌರವಿಸುತ್ತಲಿಲ್ಲ. ಬರೀ ತಾಂತ್ರಿಕ ಜ್ಞಾನವಿರುವವರನ್ನು ಮಂದಮತಿಗಳೆಂದೇ ಸಂಬೋಧಿಸುತ್ತಿದ್ದರು.

**ವೈದ್ಯಕೀಯ :**

ವಿದ್ವಾಂಸರು ಯಥಾರ್ಥವಾದ ಸ್ತುತಿಯನ್ನೂ ರೂಢಿಸಿಕೊಳ್ಳಲು ಸಮರ್ಥರಾಗುತ್ತಿದ್ದರು. ಶಸ್ತ್ರಕ್ರಿಯೆ ಹಾಗೂ ಔಷಧಾಲಯಗಳಲ್ಲಿಯ ತರಬೇತಿಯನ್ನು ಅವರ ಪ್ರತಿಕ್ರಿಯೆಯನ್ನು ತಿಳಿದುಕೊಂಡು ನೀಡಲಾಗುತ್ತಿತ್ತು. ಗ್ರೀಕ್ ಇತಿಹಾಸ

ಕಾರನಾದ ಸ್ಟ್ರ್ಯಾಬೋನು, 'ಭಾರತೀಯರು ಅತ್ಯುತ್ತಮ ಶಸ್ತ್ರ ಚಿಕಿತ್ಸಕರಾಗಿದ್ದು ಅದರಲ್ಲೂ ಹಾವು ಕಡಿತದ ಉಪಚಾರದಲ್ಲಿ ಒಳ್ಳೇ ಪ್ರಾವೀಣ್ಯತೆಯನ್ನು ಪಡೆದಿದ್ದರು.' ಎಂದು ಬರೆದಿದ್ದಾನೆ.

ಅನನುಭವಸ್ಥ ಅಭ್ಯರ್ಥಿಗಳಿಗೆ ಅನುಭವಸ್ಥ ಪಂಡಿತರಿಂದ ಶಸ್ತ್ರಕ್ರಿಯೆಯನ್ನು ಹೇಳಿಸಲಾಗುತ್ತಿತ್ತು. ಕೇವಲ ಪಾರಂಗತರಾದ ಶಸ್ತ್ರಕ್ರಿಯಾಕಾರರಿಗೆ ಮಾತ್ರ ಕರುಳಿಗೆ ಸಂಬಂಧಿಸಿದ ಶಸ್ತ್ರಕ್ರಿಯೆಯನ್ನೂ ನಡೆಸಲು ಒಪ್ಪಿಗೆ ಕೊಡಲಾಗುತ್ತಿತ್ತು. ದೀರ್ಘ ಕಾಲದ ವ್ರಣಗಳು, ಕಣ್ಣುಪರೆ, ಅಂಡವಾಯು, ಇನ್ನೂ ಹುಟ್ಟದಿರುವ ಗರ್ಭಾಶಯದಲ್ಲಿಪ್ಪ ಮಗುವನ್ನು ಹೊರಗೆ ತೆಗೆಯುವದು, ಮತ್ತು ನರಗಳ ಸ್ಥಾನಾಂತರ ಮುಂತಾದವುಗಳಿಗೂ ಪಾರಂಗತರಿಗೇ ಒಪ್ಪಿಗೆ ಕೊಡಲಾಗುತ್ತಿತ್ತು. ರೋಗಿಗಳನ್ನು ಮದ್ಯದಿಂದ, ಅಮಲಿನಿಂದ ಮೈಮರೆಸಲಾಗುತ್ತಿತ್ತು. ಮನುಷ್ಯರಿಗೆ ಮಾತ್ರವಲ್ಲದೇ ಪ್ರಾಣಿಗಳಿಗೂ ನಿಷ್ಣಾತ ವೈದ್ಯರಿಂದ ಚಿಕಿತ್ಸೆ ಮಾಡಿಸಲಾಗುತ್ತಿತ್ತು. ಜಗತ್ತಿನ ಇತಿಹಾಸದಲ್ಲಿಯೇ ಪ್ರಪ್ರಥಮ ಬಾರಿಗೆ ಅರಸು ಅಶೋಕನು ಪಶು ವೈದ್ಯಶಾಲೆಯನ್ನು ಪ್ರಾರಂಭಿಸಿದ.

ಅದರಂತೆಯೇ ಯುದ್ಧ ರಂಗದಲ್ಲಿ ಗಾಯಗೊಂಡ ಗಾಯಾಳುಗಳನ್ನು ಸಾಗಿಸಲು ವೈದ್ಯಕಿಯ ವಾಹನಗಳನ್ನು (ಅಂಬ್ಯುಲನ್ಸ್ ಕಾರ) ಬಳಸಲಾಗುತ್ತಿತ್ತು. ಕ್ರಿಮಿಯನ್ ಯುದ್ಧಕ್ಕಿಂತ ಮೊದಲು ಇಂಥ ವಾಹನಗಳನ್ನು ಇನ್ನೂ ಬಳಕೆಯಲ್ಲಿ ಉಪಯೋಗಿಸಲಾಗುತಿತ್ತು. ಇಷ್ಟೇ ಅಲ್ಲ; ಬಗದಾದಿನ ಖಲೀಫ್ ಹಾರೂನು ಲ್‌ರಷೀದ್‌ನು ಬೇನೆ ಬಿದ್ದು, ಬದುಕುವ ಭರವಸೆಯೇ ತಪ್ಪಿಹೋದಾಗ ಆತ ಭಾರತದ ವೈದ್ಯನಾದ (ಮಾನಕ) ಹಾಗೂ ಅವನ ಸಂಗಡಿಗರನ್ನು ಬಗದಾದಿಗೆ ಕರೆಯಿಸಿಕೊಂಡಿದ್ದ. ಬಳಿಕ ತಾನು ಗುಣಮುಖವಾದೊಡನೆ ಮಾನಕನಿಗೆ ಅಲ್ಲಿಯೇ ಇರಲು ಹಾಗೂ ಆಯುರ್ವೇದವನ್ನು ಭಾಷಾಂತರಿಸಿಕೊಡಲು ವಿನಂತಿಸಿಕೊಂಡ ಅಲ್ಲದೆ ಉಚ್ಚ ವಿದ್ಯಾಲಯಗಳಿಗೆ ಶಿಕ್ಷಣ ಹೇಳಿಕೊಡಲು ಭಾರತೀಯ ಮಹಿಳಾ ಸೂಲಗಿತ್ತಿಯರಿಗೆ ಆಮಂತ್ರಣವಿತ್ತಿದ್ದ.

ಕ್ರೈಸ್ತನ ಜನ್ಮದ ಶತಕಾರಂಭದಲ್ಲಿ ತಕ್ಷಶಿಲಾ ವಿಶ್ವವಿದ್ಯಾಲಯವು ವೈದ್ಯಾಭ್ಯಾಸದಲ್ಲಿ ಉನ್ನತ ಮಟ್ಟದಲ್ಲಿದ್ದಿತು. ಅದೇ ಪ್ರಕಾರವಾಗಿ ಉಜ್ಜಯಿನಿ ವಿಶ್ವವಿದ್ಯಾಲಯದಲ್ಲಿಯೂ ಗಣಿತ, ಜ್ಯೋತಿಷ್ಯ, ಖಗೋಳ ಶಾಸ್ತ್ರದಲ್ಲಿ ಪಾರಂಗತರಾದ ವಿದ್ವಾಂಸರಿದ್ದರು. ಅವರಿಗೆ ಸಹಾಯಕವಾಗಿ ಪ್ರಸಿದ್ಧ ಹಾಗೂ ಸುಸಜ್ಜಿತವಾದ ವೇಧ ಶಾಲೆಯೂ ಇತ್ತು. ಅದರಂತೆ ದಕ್ಷಿಣ ಭಾರತದ ಕಾಂಚಿ ವಿಶ್ವವಿದ್ಯಾಲಯವೂ

ಸುಪ್ರಸಿದ್ಧ ಶಿಕ್ಷಣ ಕೇಂದ್ರವಾಗಿತ್ತು.

**ಬ್ರಹ್ಮಚರ್ಯಕ್ಕೆ ಪ್ರಾಶಸ್ತ್ಯ :**

ನಾಲಂದಾ ವಿಶ್ವವಿದ್ಯಾಲಯದಲ್ಲಿ ಬ್ರಹ್ಮಚರ್ಯ ಸರ್ವ ಸಾಮಾನ್ಯವಾಗಿತ್ತು. ಬ್ರಹ್ಮಚರ್ಯ ಜೀವನ ಉತ್ತ ವ್ಯಾಸಂಗಕ್ಕೇ ಮೀಸಲಾಗಿತ್ತು. ಮೆಗ್ಯಾಸ್ಥೆನೀಸನು ನಾಲ್ವತ್ತೆಂಟು ವರ್ಷಗಳ ವರೆಗೆ ಬ್ರಹ್ಮಚಾರಿಯಾಗಿ ಅಭ್ಯಾಸಮಾಡಿದ ಬ್ರಾಹ್ಮಣರ ಹೆಸರುಗಳನ್ನು ಉಲ್ಲೇಖಿಸಿದ್ದಾನೆ. ಮನು ಮಹರ್ಷಿಯೂ ಸಹ ಪ್ರತಿಯೊಂದು ವೇದವನ್ನು ಹನ್ನೆರಡು ವರ್ಷಗಳವರೆಗೆ ಅಧ್ಯಯನಿ (ನಾಲ್ಕು ವೇದಗಳಿಗೆ ೪೮ ವರ್ಷಗಳು) ಸಬೇಕೆಂದು ಹೇಳಿದ್ದಾನೆ. ಅದೂ ಗುರುಕುಲವಾಸದಲ್ಲಿಯೇ ಬ್ರಹ್ಮಚಾರಿಯಾಗಿ ಕಳೆಯಬೇಕೆಂದು ವಿಧಿಸಿದ್ದಾನೆ. ಧಾರಣಾ ಶಕ್ತಿ ಕಡಿಮೆಇದ್ದಲ್ಲಿ ೩೬ ಇಲ್ಲವೇ ೧೮ ಇಲ್ಲವೇ ೯ ವರ್ಷಗಳು ಗುರುಕುಲದಲ್ಲಿಯೇ ಕಳೆಯಬೇಕೆಂದು ಅವನ ನಿಯಮ.

ಈ ಬ್ರಹ್ಮಚಾರಿಗಳು, ತರ್ಕಶಾಸ್ತ್ರ, ವ್ಯಾಕರಣ, ತತ್ತ್ವಜ್ಞಾನಗಳನ್ನು ಅಭ್ಯಾಸಿಸುತ್ತಿದ್ದರು.

**ಶಿಕ್ಷಣದಾನ :**

ನಾಲಂದಾ ವಿಶ್ವವಿದ್ಯಾಲಯದಲ್ಲಿ ಹಾಗೂ ಇತರ ವಿಶ್ವವಿದ್ಯಾಲಯಗಳಲ್ಲಿ ಶ್ರೀಮಂತ ಹಾಗೂ ಬಡವನೆಂಬ ಭೇದವಿಲ್ಲದೇ ಎಲ್ಲರಿಗೂ ಸಮನಾಗಿ ಶಿಕ್ಷಣ ನೀಡಲ್ಪಡುತ್ತಿತ್ತು. ರಾಜಕುಮಾರ ಹಾಗೂ ಬಡರೈತ ಇವರಿಗೂ ಒಂದೇ ಗುರುವಿನ ಬಳಿ ಒಂದೇ ತೆರನಾದ ಶಿಕ್ಷಣ, ಒಂದೇ ನಿಯಮಕ್ಕನುಸಾರವಾಗಿ ನೀಡಲ್ಪಡುತ್ತಿತ್ತು. ಇದಕ್ಕೆ ಮಹಾಭಾರತದ ದ್ರೋಣ ಹಾಗೂ ದ್ರುಪದರೇ ತಕ್ಕ ಉದಾಹರಣೆ. ಶಿಕ್ಷಣವು ವಿಶಾಲ ತಳಹದಿಯ ಮೇಲೆ ನೀಡಲ್ಪಡುತ್ತಿದ್ದು, ಆತ್ಮ ಜ್ಞಾನ ಹಾಗೂ ಸ್ವತಂತ್ರ ಜೀವನವೇ ಶಿಕ್ಷಣದ ಕೊನೆಯ ಗುರಿಯಾಗಿತ್ತು. ಅಲ್ಲದೇ "ತ್ಯಾಗದಿಂದ ಮುಕ್ತಿ" (ಕಾಯಕವೇ ಕೈವಲ್ಯ) ಎಂಬ ಭಾವನೆಯೇ ಪ್ರಾಮುಖ್ಯವಾಗಿತ್ತು. ಬಂಧ ವಿಮೋಚನೆ, ಸ್ವನಿಯಂತ್ರಣ, ಜೀವನ ಸಾಧನೆಗೆ ತಕ್ಕ ಮಾರ್ಗದರ್ಶನ ಇತ್ಯಾದಿ ಶಿಕ್ಷಣವು ಜೀವನದ ಮುಖ್ಯಾಂಶಗಳನ್ನೇ ಒಳಗೊಂಡಿರುತ್ತಿತ್ತು.

ಜನರ ಪ್ರಶಂಸೆಗಾಗಿ ಕಲಿಯುವದನ್ನು ನಿಷೇಧಿಸಲ್ಪಟ್ಟಿದ್ದರಿಂದ ಸಮಾಜ ರಕ್ಷಣೆ, ಧರ್ಮ, ಸೈನ್ಯದ ವಿಷಯದಲ್ಲಿ ಅವರ ಚಿಕಿತ್ಸೆ ಹಾಗೂ ಅವರು ಪ್ರತಿಫಲ ಪಡೆ

ಯುವ ಇಲ್ಲವೇ ನಿರಾಕರಿಸುವ ವಿಷಯದಲ್ಲಿ ಪ್ರತಿಯೊಬ್ಬನಿಗೂ ವೈಯಕ್ತಿಕ ನಿರ್ಣಯ ಕೈಕೊಳ್ಳಲು ಅಧಿಕಾರವಿತ್ತು. ಘಟಿಕೋತ್ಸವಗಳಲ್ಲಿ ಶಿಕ್ಷಕರು ಹಾಗೂ ಅವರು ಕಲಿಸಿದ ವಿಷಯಗಳ ಮೇಲೆ ಉನ್ನತ ಮಟ್ಟದ ವಿಚಾರಗಳನ್ನೂ ನಿರ್ಣಯಗಳನ್ನೂ ಮಂಡಿಸುತ್ತಿದ್ದರು.

ಶಿಕ್ಷಕರು ತಮ್ಮ ಶಿಷ್ಯಂದಿರ ಗೌರವಕ್ಕೆ, ಹಾಗೂ ತಮಗೂ ತಮ್ಮ ವಿಶ್ವ ವಿದ್ಯಾಲಯಕ್ಕೂ ಕೀರ್ತಿ ತರುವಂತೆ ಯಾವಾಗಲೂ ಪ್ರಯತ್ನಿಸುತ್ತಿದ್ದರು. ಅಂಥ ಸಮಯದಲ್ಲಿ ಶಿಕ್ಷಕರು ದೇವನಲ್ಲಿ ಇದೇ ಅರ್ಥದ ಪ್ರಾರ್ಥನೆಯನ್ನೇ ಮಾಡುತ್ತಿದ್ದರು. ಯಸ್ಕನೆಂಬ ಪಂಡಿತ ಮಾಡಿದ ಪ್ರಾರ್ಥನೆ ಹೀಗಿದೆ "ನೀನೆನ್ನ ಸಲಹು ನಿನ್ನ ಪಾಲಿಸುವ ಭಾಂಡಾರನಾ ನಾಗುವೆ"

**ಶಿಕ್ಷಣ ಸ್ವಾತಂತ್ರ್ಯ :**

ಪ್ರಾಚೀನ ಭಾರತದಲ್ಲಿ ಶಿಕ್ಷಣದಾನಮೀಯುವ ವಿಶ್ವವಿದ್ಯಾನಿಲಯಗಳಿಗೆ ಪೂರ್ಣ ಸ್ವಾತಂತ್ರ್ಯವಿತ್ತು. ಖಾಸಗಿ ಹಕ್ಕುಗಳಿಂದ, ವ್ಯಕ್ತಿ ಸಂಸ್ಥೆಗಳಿಂದ, ಹತ್ತಿಕ್ಕಲ್ಪಟ್ಟಿರಲಿಲ್ಲ. ರಾಜಮಹಾರಾಜರೂ ಸಹ ಈ ಶಿಕ್ಷಣ ಕ್ರಮದಲ್ಲಿ ನಿಲಯಗಳಲ್ಲಿ ಅಧಿಕಾರ ಹೊಂದಿರಲಿಲ್ಲ. ಶಿಕ್ಷಕರು ಅವರಿಗೆ ತಕ್ಕಂತೆ ಶಿಕ್ಷಣ ವಿಧಾನವನ್ನು ಬದಲಾಯಿಸಿಕೊಳ್ಳಬಹುದಿತ್ತು. ಮಲೆನಾಡಿನ ರಂಭಾಪುರಿಯ ವೀರಸಿಂಹಾಸನ ಗುರುಕುಲದಲ್ಲಿ ಇತ್ತೀಚಿನ (ಕ್ರಿ. ಶ. ೧೫೦೦) ಕೆಳದಿ ಅರಸರು ಕೈ ಹಾಕಲು ಪ್ರಯತ್ನಿಸಿದಾಗ ಅಲ್ಲಿಯ ಪ್ರಾಚಾರ್ಯರು ಅರಸರನ್ನೇ ಶಾಪಕೊಟ್ಟು ಕಳಿಸಿದರಂತೆ! ಶಿಕ್ಷಕರಿಗೆ ಪೂರ್ಣ ಸ್ವಾತಂತ್ರ್ಯವಿದ್ದುದರಿಂದಲೇ ತಾವು ಕಂಡುಕೊಂಡ ಒಳ್ಳೆಯ ಮಾರ್ಗಗಳನ್ನು ತಕ್ಷಣ ವಿದ್ಯಾರ್ಥಿಗಳ ಮೇಲೆ ಪ್ರಯೋಗಿಸುತ್ತಿದ್ದರು. ಇದರಿಂದ ಶಿಕ್ಷಕ ವಿದ್ಯಾರ್ಥಿಗಳಲ್ಲಿ ಪರಸ್ಪರ ಸೌಹಾರ್ದಗಳು ಹೆಚ್ಚಿ ವಿದ್ಯಾವಂತರ ಸುಸಂಸ್ಕೃತರಾಗಲು ಬೇಗನೇ ಸಾಧ್ಯವಾಗುತ್ತಿತ್ತು.

* * * * *

ಪ್ರಾಚೀನ ಭಾರತದ ವಿಶ್ವವಿದ್ಯಾನಿಲಯಗಳನ್ನು ಕುರಿತಾದ ಈ ಲೇಖನ ಹೊಸ ಹೊಸ ವಿಷಯಗಳನ್ನು ಅರುಹುವ ಸುಂದರ ಲೇಖನವಾಗಿದೆ. ಇದನ್ನು ಓದಿದಾಗ ನಮ್ಮ ಇಂದಿನ ವಿಶ್ವವಿದ್ಯಾನಿಲಯಗಳೂ ಆ ಮಟ್ಟಕ್ಕೇರಿ ನಿಜವಾದ ಜ್ಞಾನ ನೀಯುವವನ್ನಿತ್ತು ವಿದ್ಯಾರ್ಥಿಗಳ ಭವ್ಯ ಭವಿಷ್ಯವನ್ನು ನಿರ್ಮಿಸ ಬಲ್ಲವೆ? ಎಂಬುದನ್ನು ಸಂದೇಹದಿಂದ ನೋಡಬೇಕಾಗಿದೆ. — ಸಂಪಾದಕ

* * * * *

# ಕನ್ನಡಿಯ ಬಿನ್ನಪ

ಇದ್ದಂತೆ ನಿನ್ನ ಮುಖ ನಿನಗೆ ನಾ ತೋರಿದರೆ
ನನ್ನ ಮೇಲೇಕಿನಿತು ರೋಷ ನೋಟಕನೆ?
ಮೂಲ ಆಕೃತಿಯು ವಿಕೃತಿಯನು ಪ್ರತಿಕೃತಿಯು
ಹೋಗಲಾಡಿಸಬಲ್ಲುದೆಂತು ವೀಕ್ಷಕನೆ?

ಮೂಲದಲ್ಲಿಲ್ಲದಿಹ ಚೆಲುವ ಚಿಗುರಿಸಲಾರೆ
ಮೂಲದ ಕೂರೂಪವನು ಕಳೆಯಲಾರೆ!
ವಾಸ್ತವದ ವದನಕ್ಕೆ ಈಪ್ಸಿತದ ಬಣ್ಣವನು
ಆಕಾಂಕ್ಷೆಗಳ ಒಪ್ಪ ಬಳಿಯಲಾರೆ!

ನನ್ನಲ್ಲಿ ನೀ ಚೆಂದ ಕಾಣಬೇಕಾದರೆ
ನಿನ್ನ ಮೊಗವನೆ ಮೊದಲು ಸರಿಪಡಿಸಿಕೋ!
ಪ್ಲಾಸ್ಟಿಕ್ ಸರ್ಜರಿಯೊ ಬ್ಯೂಟೀಷಿಯನ್ ಶಾಪೊ
ಯಾವುದು ಉಪಾಯವೋ ಅದಮಾಡಿಕೋ!

ನಿನಾಗವಿದ್ದರೂ ಒಂದಾಗ ಬಲ್ಲುದು—
ಮನದ ಚೆಲುವನು ಮೊಗದಿ ಬಿಮ್ಬಿಸಯ್ಯ!
ಇದ್ದದ್ದರಲ್ಲಿಯೇ ಉದ್ಭವಿಸಿ ಬೆಳಗೀತು
ಇಲ್ಲನಂದನವು, ಮಾಡಿ ಮೊಗವನ್ನು ರಮ್ಯ!

— ಕಾವ್ಯಾನಂದ

# ಕಲ್ಯಾಣದ ಚಾಲುಕ್ಯ ಹಾಗೂ ಕಲಚುರಿ ಅರಸರ ಕಾಲದ ಕುಕನೂರು.

**ವಿ. ಶ್ರೀ. ಕುಲಕರ್ಣಿ M. A. B. Ed. ಅಂಕಲಗಿ.**

ಸರಕಾರಿ ಹಾಯಸ್ಕೂಲ ಬಸವಕಲ್ಯಾಣ ಜಿ|| ಬೀದರ.

ಕುಕನೂರು ಇಂದು ರಾಯಚೂರು ಜಿಲ್ಲೆಯ ಯಲಬುರ್ಗಿ ತಾಲೂಕಿನ ದೊಡ್ಡ ಊರಾಗಿದೆ. ಕಲ್ಯಾಣದ ಚಾಲುಕ್ಯ ಮನೆತನ ಹಾಗೂ ಅವರ ತರುವಾಯ ಆಳಿದ ಕಲಚುರಿ ಮನೆತನದ ರಾಜರ ಆಳಿಕೆಯಲ್ಲಿ ಈ ಊರು ಅನೇಕ ದೃಷ್ಟಿಯಿಂದ ಮಹತ್ವಪೂರ್ಣವಾದ ಸ್ಥಾನವನ್ನು ಪಡೆದಿತ್ತು. ಅನೇಕ ರಾಜರು ರಾಜ ಪ್ರತಿನಿಧಿಗಳು ಹಾಗು ಅಧಿಕಾರಿಗಳು ಈ ಸ್ಥಳವನ್ನು ಸಂದರ್ಶಿಸಿದ್ದರು. ಕುಕನೂರು ಆ ಬಿಸ ಕಾಲದಲ್ಲಿ ಸಾಂಸ್ಕೃತಿಕ ಹಾಗು ರಾಜಕೀಯ ದೃಷ್ಟಿಯಿಂದ ಬಹಳ ಪ್ರಸಿದ್ಧಿಯನ್ನು ಪಡೆದಿತ್ತು. ಇ. ಸ. ೧೦೦೫ ರಲ್ಲಿ ರಚಿತವಾದ, ಕಲ್ಯಾಣದ ಚಾಲುಕ್ಯ ಮನೆತನದ ರಾಜನಾದ ಸತ್ಯಾಶ್ರಯ ಇರಿವ ಬೆಡಂಗನ ಕಾಲದ ಶಾಸನದಿಂದ ಹಿಡಿದು. ಕಲಚುರಿ ಮನೆತನದ ರಾಜನಾದ ಸಂಕಮದೇವನ ಆಳಿಕೆಯ ವರೆಗಿನ ಶಾಸನಗಳು (ಇ. ಸ. ೧೧೭೯) ಇಲ್ಲಿ ದೊರೆತಿವೆ. ಈ ಕಾಲದಲ್ಲಿಯ ಕುಕನೂರಿನ ಅನೇಕ ಸಂಗತಿಗಳು ತಿಳಿದು ಬರುತ್ತವೆ. ಈ ಒಂದುನೂರಾಎಪ್ಪತ್ತು ವರ್ಷಗಳ ಅವಧಿಯಲ್ಲಿ ಕುಕನೂರು ತನ್ನ ವೈಶಿಷ್ಟ್ಯವನ್ನು ಕಾಯ್ದುಕೊಂಡಿತ್ತು.

ಕಲ್ಯಾಣದ ಚಾಲುಕ್ಯ ಮನೆತನದ ರಾಜರು ಧರ್ಮ ಹಾಗು ಸಂಸ್ಕೃತಿಯ ಪೋಷಕರಾಗಿದ್ದರು. ಈ ಮನೆತನದ ರಾಜನಾದ ಸತ್ಯಾಶ್ರಯ ಇರಿವ ಬೆಡಂಗನ ಕಾಲದಲ್ಲಿ (ಇ. ಸ- ೧೦೦೫) ಕುಕನೂರು ಊರ್ಜಿತಾವಸ್ಥೆಯಲ್ಲಿದ್ದಿತು. ಈ ರಾಜನ ಆಳಿಕೆಗಿಂತ ಮೊದಲೇ ಸಹ ಈ ಊರು ತನ್ನ ಪ್ರಾಚೀನ ಮಂದಿರ ಹಾಗು ಅಗ್ರಹಾರದ ಮೂಲಕ ಬಹಳ ಪ್ರಸಿದ್ಧಿಯನ್ನು ಪಡೆದಿತ್ತೆಂದು ಹೇಳಬಹುದು. ರಾಷ್ಟ್ರಕೂಟ ಅರಸರ ಕಾಲದಲ್ಲಿಯೂ ಈ ಊರು ಅಸ್ತಿತ್ವದಲ್ಲಿತ್ತೆಂದು ತಿಳಿಯಬಹುದು. ಆದರೆ ಕಲ್ಯಾಣದ ಚಾಲುಕ್ಯ ಮನೆತನದ ಅರಸರ ಕಾಲದಲ್ಲಿಯೇ ಇದಕ್ಕೆ ಪ್ರಾಶಸ್ತ್ಯ ದೊರೆಯಿತೆಂದು ತಿಳಿಯಲು ಅಡ್ಡಿಯಿಲ್ಲ- ಮುಂದೆ ಚಾಲುಕ್ಯ ರಾಜನಾದ ಆರನೆಯ ವಿಕ್ರಮಾದಿತ್ಯ (ಇ. ಸ. ೧೦೭೬–೧೧೨೬) ಭೂಲೋಕ ಮಲ್ಲ ಮೂರನೆಯ ಸೋಮೇಶ್ವರ (ಇ. ಸ. ೧೧೨೬–೧೧೩೮) ಜಗದೇಕ ಮಲ್ಲ (ಇ. ಸ ೧೧೩೮–೧೧೫೧) ಹಾಗು ಕಲಚೂರಿ ಮನೆತನದ ಬಿಜ್ಜಳ ರಾಯ ಮುರಾರಿ ಸೋವಿದೇವ ಸಂಕಮದೇವ ಅನಂತರ ದೇವಗಿರಿ ಯಾದವ ಮನೆತನದ ರಾಜನಾದ ಸಿಂಘಣ

ಮುಂತಾದ ರಾಜರ ಆಳಿಕೆಯಲ್ಲಿ ಕುಕನೂರು ಅವರ ಅಧೀನಕ್ಕೆ ಒಳಪಟ್ಟು ಅನೇಕ ಕಾರಣಗಳಿಂದ ತನ್ನ ಪ್ರಾಚೀನ ಪರಂಪರೆಯನ್ನು ಕಾಯ್ದುಕೊಂಡಿತ್ತೆಂದು ಶಾಸನಗಳಿಂದ ತಿಳಿದು ಬರುತ್ತದೆ. ದೇವಗಿರಿಯ ಯಾದವ ಮನೆತನದ ರಾಜರು ಧರ್ಮ ಹಾಗು ಸಂಸ್ಕೃತಿಯ ಪೋಷಕರಾಗಿದ್ದುದು ಸರ್ವವಿದಿತವಾಗಿದೆ. ಇವರ ಆಳಿಕೆಯಲ್ಲಿಯೂ ಕುಕನೂರು ಸಾಂಸ್ಕೃತಿಕ ಹಾಗು ಶೈಕ್ಷಣಿಕ ಕೇಂದ್ರವಾಗಿತ್ತು. ಅದರಂತೆ ಧಾರ್ಮಿಕ ಕ್ಷೇತ್ರವೆಂದು ತನ್ನ ಸುತ್ತುಮುತ್ತಲಿನ ಪ್ರದೇಶದಲ್ಲಿ ಖ್ಯಾತಿಯನ್ನು ಪಡೆದಿತ್ತು. ಆದುದರಿಂದ ಈ ಊರು ಚಾಲುಕ್ಯ ರಾಜರಿಂದ ಹಿಡಿದು ದೇವಗಿರಿ ರಾಜರ ಆಳಿಕೆಯವರೆಗೆ ತನ್ನ ವೈಶಿಷ್ಟ್ಯವನ್ನು ಚೆನ್ನಾಗಿ ಕಾಯ್ದುಕೊಂಡು ಉತ್ತರ ಭಾರತದಿಂದ ಮುಸಲ್ಮಾನರು ದಕ್ಷಿಣಕ್ಕೆ ಬಂದು ತಮ್ಮ ರಾಜ್ಯವನ್ನು ಸ್ಥಾಪಿಸುವವರೆಗೆ ಚೆನ್ನಾಗಿ ಊರ್ಜಿತ ಅವಸ್ಥೆಯಲ್ಲಿದ್ದಿತೆಂದು ಹೇಳಬಹುದು.

ದೇವಗಿರಿ ಯಾದವ ಸಿಂಘಣನ ಕಾಲದ ತರುವಾಯದ ಶಿಲಾಲೇಖಗಳು ನಮಗೆ ಕುಕನೂರಿನಲ್ಲಿ ದೊರೆತಿಲ್ಲವಾದರೂ ಅಲ್ಲಿಯ ಅಗ್ರಹಾರ ಹಾಗು ಮಂದಿರಗಳ ಪರಂಪರೆಯು ಮುಸಲ್ಮಾನರ ಆಳಿಕೆಯಲ್ಲಿ ತನ್ನ ಹಿಂದಿನ ಪ್ರಭಾವವನ್ನು ಕಳೆದುಕೊಂಡರೂ, ನಾಡಿನ ಸಾಂಸ್ಕೃತಿಕ ಪರಂಪರೆಯನ್ನು ರಕ್ಷಿಸಲು ಅಷ್ಟು ಅವ್ಯಾಹತವಾಗಿ ಪ್ರಯತ್ನಿಸಿ ಬಾಳಿದನೆಂದು ಹೇಳಲು ಅಡ್ಡಿಯಿಲ್ಲ.

ಚಾಲುಕ್ಯ ರಾಜರ ಆಳಿಕೆಯು ಅನೇಕ ದೃಷ್ಟಿಯಿಂದ ಮಹತ್ವಪೂರ್ಣವಾಗಿದೆ. ಇವರು ಗೊತ್ತಿದ್ದಂತೆ ಸುಸಂಸ್ಕೃತರೂ, ಕಲಾಪೋಷಕರೂ, ಧರ್ಮಾಭಿಮಾನಿಗಳೂ ಆಗಿದ್ದರು. ಇವರ ಕಾಲದಲ್ಲಿ ದೇಶದಲ್ಲಿ ಅಸಂಖ್ಯಾತ ಮಂದಿರಗಳು ನಿರ್ಮಾಣವಾದವು. ಈ ಮಂದಿರಗಳು ಅತ್ಯಂತ ಸುಂದರವಾಗಿವೆ. ಈ ಕಾಲದ ಶಿಲ್ಪಗಳಿಗೆ ಚಾಲುಕ್ಯ ಶಿಲ್ಪವೆಂದು ಹೆಸರು ಬಿದ್ದಿದೆ. ಚಾಲುಕ್ಯ ರಾಜರು ಈ ತರದ ಶಿಲ್ಪಕ್ಕೆ ಪ್ರೋತ್ಸಾಹನೆ ಕೊಟ್ಟಿದ್ದರು. ಅದರಂತೆ ರಾಜ ಪ್ರತಿನಿಧಿಗಳು, ಸಾಮಂತರು, [illegible]ಯರು ಜನಸಾಮಾನ್ಯರು ಮುಂತಾದವರು ಮಂದಿರ ನಿರ್ಮಾಣಕ್ಕೆ ಸಕ್ರಿಯವಾದ ಸಹಾಯ ಮಾಡುತ್ತಿದ್ದರು. ಆದುದರಿಂದಲೇ ಕುಕನೂರಿನಲ್ಲಿ ಅನೇಕ ಮಂದಿರಗಳು ನಿರ್ಮಾಣವಾದವು. ರಾಜರು ಹಾಗು ರಾಜ್ಯದ ಹಿರಿಯ ಅಧಿಕಾರಿಗಳು ಉದಾರಿಯಾದುದರಿಂದ ಎಲ್ಲ ಮತದವರ ಸಂಗಡ ಸಮಾನವಾಗಿ ನಡೆದುಕೊಳ್ಳುತ್ತಿದ್ದರು. ಕುಕನೂರಿನಲ್ಲಿ ಎಲ್ಲ ಮತದವರು ವಾಸವಾಗುತ್ತಿದ್ದರು. ಬ್ರಾಹ್ಮಣರು, ಶೈವರು, ಜೈನರು ಮುಂತಾದವರು, ಇಲ್ಲಿರುತ್ತಿದ್ದರು. ಅವರೆಲ್ಲರೂ ತಮ್ಮ ತಮ್ಮ ಧರ್ಮಾಚರಣೆಯನ್ನು ಪರಿಪಾಲಿಸುತ್ತಿದ್ದರು. ಹಿಂದಿನ ಕಾಲದಲ್ಲಿ [illegible] [illegible]

ಧರ್ಮವಕೇಂದ್ರವಾಗಿದ್ದಂತೆ ಕುಕನೂರು ಹಿಂದೂ ಧರ್ಮದ ಪ್ರಮುಖ ಸ್ಥಳವಾಗಿತ್ತು. ಚಾಲುಕ್ಯ ರಾಜರು ಇಲ್ಲಿಯ ಅಗ್ರಹಾರಕ್ಕೆ ಸಕ್ರಿಯವಾಗಿ ಸಹಾಯ ಮಾಡುತ್ತಿದ್ದರು. ಆದ್ದರಿಂದ ನಾಡಿನ ನಾನಾ ಭಾಗದಿಂದ ವಿದ್ವಾಂಸರು ಇಲ್ಲಿಗೆ ಬರುತ್ತಿದ್ದರು. ಇಲ್ಲಿ ಅವರಿಗೆ ಜೀವನೋಪಾಯದ ಅನುಕೂಲತೆಗಳನ್ನು ಊರ ಹಿರಿಯರು ಒದಗಿಸಿ ಕೊಟ್ಟಿದ್ದರಿಂದ ಅವರು ಸ್ಥಿರವಾಗಿ ನೆಲೆಸುತ್ತಿದ್ದರು. ಕೊಂಕಣ ಪ್ರದೇಶದ ಬ್ರಾಹ್ಮಣರು ಸಹ ತಮ್ಮ ದೇಶವನ್ನು ಬಿಟ್ಟು ಇಲ್ಲಿ ವಾಸಮಾಡಿದ್ದರೆಂದು ಶಾಸನಗಳಲ್ಲಿ ಉಲ್ಲೇಖಿತರಾದ ಹಲವಾರು ಹೆಸರುಗಳಿಂದ ಉದಾಹರಣೆಯಾಗಿ 'ಘೈಸಾಸ' ಮುಂತಾದ ಅಡ್ಡ ಹೆಸರುಗಳಿಂದ ತಿಳಿದುಕೊಳ್ಳಬಹುದು. ಕಾರಣ ಇಂದಿಗೂ ಕೊಂಕಣಸ್ಥ ಬ್ರಾಹ್ಮಣರ ಅನೇಕ ಅಡ್ಡ ಹೆಸರುಗಳಲ್ಲಿ 'ಘೈಸಾಸ' ಎಂಬ ಅಡ್ಡ ಹೆಸರು ಪ್ರಚಾರದಲ್ಲಿದೆ. ಈ ರೀತಿಯಾಗಿ ಅನೇಕ ಪಂಡಿತರು ಇಲ್ಲಿ ಬಂದು ನೆಲೆಸಿದ್ದರು. ಇದು ಸಾಂಸ್ಕೃತಿಕ ಹಾಗು ಶೈಕ್ಷಣಿಕ ಸ್ಥಳವೆಂದು ಹೆಸರು ಪಡೆದಿದ್ದಿತು. ಅಂದಿನ ಕಾಲದಲ್ಲಿ ಕುಕನೂರು ಒಂದು ಪ್ರಸಿದ್ಧ ಹಾಗು ಸಮೃದ್ಧವಾದ ಊರೆಂದು ಹೆಸರಾಗಿ ಪ್ರಾಕೃತಿಕ ಸೌಂದರ್ಯದಿಂದ ಕೂಡಿತ್ತು.

## ........ ಊರ ವರ್ಣನೆ .. ....

ಕುಕನೂರು ಬೆಳ್ವೊಲ ನಾಡಿನಲ್ಲಿ ಒಳಗೊಂಡಿತ್ತು. ಈ ಬೆಳ್ವೊಲ ನಾಡಿನಲ್ಲಿಯೇ ಕುಕನೂರು ಮೂವತ್ತು ಸೊಗಯಿಸುತ್ತಿತ್ತು. ಶಾಸನವಲ್ಲಿ ಇದರ ವಿಷಯವಾಗಿ ಹೀಗೆ ಸುಂದರವಾಗಿ ವರ್ಣಿಸಲಾಗಿದೆ.

ಅಂತಾ ಕುಂತಳ ದೇಶಾ
ಭ್ಯಂತರದೊಳು ಚೆಲ್ವನಪ್ಪ ಬೆಳ್ವಲ ನಾಡುಂ।
ಚಿಂತವಣಿಂತಸ್ಥಿತಿಯಿಂ
ಕಾಸ್ತ್ರಂ ತಾಂ ಕುಕ್ಕನೂರ ಮೂವತ್ತೆಂತು ॥೧॥
ಆ ಮೂವತ್ತರ ನಡುವೆ ಮ
ಹಾಸುಹಿಮಂ ಸರ್ವಸಂಪದಧಿಕತೆಯಿಂದಂ
ಶ್ರೀ ಮನ್ಮಹಾಗ್ರಹಾರವ
ಸಾಮಾನ್ಯಂ ಕುಕ್ಕನೂರುಮಿಗೆ ಸೊಗಯಿಸುಗುಂ ॥೨॥

ಕುಕನೂರು ನಾಲ್ವತ್ತೆಂಟು ಕೇರಿಗಳಿಂದ ಕೂಡಿತ್ತು. ಸಮಾಜದ ಅನೇಕ ವರ್ಗದವರು ಅಲ್ಲಿ ಸುಖವಾಗಿ ತಮ್ಮ ಜೀವನವನ್ನು ಸಾಗಿಸುತ್ತಿದ್ದರು. ಬ್ರಾಹ್ಮಣರ ಕೇರಿಯು, ವ್ಯಾಪಾರಸ್ಥರ ಕೇರಿಯು, ಶೂದ್ರರ ಕೇರಿಗಳೂ ಇದ್ದವು. ಶೈವರು

ಮತ್ತು ಕಡಮೆಯಿತ್ತೆಂದು ಜೈನರೂ ಅಲ್ಲಿ ವಾಸಿಸುತ್ತಿದ್ದರು. ಆದರೆ ಶೈವರ ಸಂಖ್ಯೆ ಜೈನರ ಸಂಖ್ಯೆಗಿಂತ ತೋರುತ್ತದೆ. ನಗರದ ಸುತ್ತಲು ಅನೇಕ ಬಾಳೆಯ ತೋಟಗಳಿದ್ದು ಅವರ ರಮ್ಯತೆ ಇನ್ನೂ ಹೆಚ್ಚಿತ್ತು. ಕಿತ್ತಳೆಹಣ್ಣಿನ ತೋಟಗಳು ವಿಪುಲವಾಗಿದ್ದು ಅವುಗಳಲ್ಲಿಯ ತನಿವಣ್ಣುಗಳು ಪ್ರಸಿದ್ಧವಾಗಿದ್ದವು. ಊರ ಸುತ್ತಲು ಹಲವಾರು ಕೆರೆಗಳಿದ್ದವು. ಈ ಕೆರೆಗಳಿಂದ ನೂರಾರು ಹೊಲಗದ್ದೆಗಳಿಗೆ ಹಾಗು ತೋಟಗಳಿಗೆ ನೀರು ದೊರೆಯುತ್ತಿದ್ದಿತು. ಈ ಕೆರೆಗಳು ನಯನ ಮನೋಹರವಾಗಿದ್ದವು. ಕೋಗಿಲೆಗಳು ಸುಸ್ವರಲಹರಿಯಿಂದ ಧ್ವನಿಗೈಯುತ್ತಿದ್ದವು. ಕುಕನೂರು ಪಂಡಿತರ, ಶ್ರೀಮಂತರ ನಗರವಾಗಿದ್ದಂತೆ ರಸಿಕರ ವಿಹಾರ ಸ್ಥಳವೂ ಆಗಿದ್ದಿತು. ಅಲ್ಲಿಯ ಸೂಳೆಗೇರಿಯ ಚೆಲುವೆಣ್ಣಳು ತಮ್ಮ ನಗೆಮೊಗದಿಂದ ತಣ್ಣದಿರನು ಇಳಿಸುವ ಸಾಮರ್ಥ್ಯವುಳ್ಳವರಾಗಿದ್ದರು. ಊರಲ್ಲಿ ಹಲವಾರು ಸುಂದರವಾದ ಮಂಟಪಗಳಿದ್ದವು, ಅನೇಕ ದೇಗುಲಗಳಿದ್ದವು. ಮೇಲೆ ತಿಳಿಸಿದಂತೆ ಪಣ್ಯಾಂಗನೆಯರ ವೀಧಿಗಳೂ ಇದ್ದವು. ನಾಲ್ಕು ದಿಕ್ಕಿನಲ್ಲಿ ಹೋಗಲು ಬರುವಂತಹ ವಿಶಾಲವಾದ ರಾಜ ಮಾರ್ಗಗಳಿದ್ದವು. ಬ್ರಾಹ್ಮಣರ ಕೇರಿಗಳಲ್ಲಿ ವೇದ ಪಾಠಗಳು ಅವ್ಯಾಹತವಾಗಿ ನಡೆಯುತ್ತಿದ್ದಿತು. ಅಲ್ಲಿಯ ಅಗ್ರಹಾರದಲ್ಲಿ ಸಮಸ್ತ ಶಾಸ್ತ್ರಗಳಲ್ಲಿ ಪಾರಂಗತರಾದ ಬ್ರಾಹ್ಮಣರಿದ್ದರು. ಶಾಸನದಲ್ಲಿ ಅವರ ವಿಷಯವಾಗಿ ಹೀಗೆ ವರ್ಣನೆ ಬರುತ್ತದೆ.

ಗರ್ವೋರ್ವಿಪೇತರ್ ವಿದಿತ ಚ
ತುರ್ವೇದಸ್ಸರ್ಕಳ್ ಶಬ್ದ ವಿದ್ಯಾನಿಪುಣ ।
ರ್ಸ್ವ ಚಾರ್ವಿತ ತರ್ಕಸರ್ವ
ನಿರ್ವಾಹೆ, ಕುಕ್ಕನೂರೊಳ ಸನಳ, ದೆಸೆದಸು- ॥

ಇವರೆಲ್ಲರೆ ಅವರು ಅಗ್ನಿಷ್ಟೋಮಾದಿಕ ವಿಪುಳಯಾಗ ಸಂಪಾದಕರಾಗಿದ್ದರು ಇಲ್ಲಿಯ ಮಹಾಗ್ರಹಾರದಲ್ಲಿ ಒಂದು ಸಾವಿರ ಬ್ರಾಹ್ಮಣರು ತಮ್ಮ ಪರಿವಾರ ಸಹಿತವಾಗಿ ವಾಸಮಾಡುತ್ತಿದ್ದರು. ಅನೇಕ ರಾಜ ಪ್ರತಿನಿಧಿಗಳು, ದಂಡನಾಯಕರು ಇತರ ಪ್ರತಿಷ್ಠಿತ ಜನರು ಆಗಾಗ್ಗೆ ಈ ಸ್ಥಳಕ್ಕೆ ಭೆಟ್ಟಿಕೊಡುತ್ತಿದ್ದರು. ಜಿಲ್ಲೆ ನಾಡಧಿಕಾರಿಗಳೂ ಇಲ್ಲಿಗೆ ಬಂದು ಇಲ್ಲಿಯ ಪ್ರಸಿದ್ಧ ದೇವಸ್ಥಾನಗಳ ದರ್ಶನವನ್ನು ಪಡೆದುಕೊಂಡು ಕೃತಾರ್ಥರಾಗಿ ಅನೇಕ ದಾನ ಧರ್ಮಾದಿಗಳನ್ನು ಮಾಡುತ್ತಿದ್ದರು

ಹೀಗೆ ಆ ದಿನದ ಕಾಲದಲ್ಲಿ ಕುಕನೂರು ಧಾರ್ಮಿಕ, ಸಾಂಸ್ಕೃತಿಕ ಕೇಂದ್ರವೆಂದು ಪ್ರಸಿದ್ಧಿ ಪಡೆದಿತ್ತು. ತನ್ನ ವಿಶೇಷತೆಗಳ ಮೂಲಕ ಅನೇಕ ಜನರನ್ನು ತನ್ನೆಡೆಗೆ ಆಕರ್ಷಿಸಿತ್ತು.

---

* ಈ ಲೇಖನ ಶ್ರೀ. ಪಾಂ. ಭೀ. ದೇಸಾಯಿ ಇವರ ಶಾಸನ ಪರಿಚಯ ಗ್ರಂಥಕ್ಕೆ ಋಣಿ. - ಲೇಖಕ

# ತತ್ತ್ವಾನುಷ್ಠಾನವಿಲ್ಲದ ವ್ಯಕ್ತಿಪೂಜೆ

**ವಿ. ಶಿ. ಹೇರೂರು ಶಹಪುರ.**

ತತ್ತ್ವಾನುಷ್ಠಾನಕ್ಕಿಂತ ವ್ಯಕ್ತಿ ಪೂಜೆಗೆ ಭಾರತೀಯರು ಮಹತ್ವ ಕೊಡುತ್ತಿರುವುದು ತೀರ ಅಸಹ್ಯವೆನಿಸತೊಡಗಿದೆ. ಅದು ದೂರವಾಗಬೇಕು. ಕುಶಲ ಕರ್ಮಿಯ ಕುಂಚದಿಂದ ಮಹಾತ್ಮರ ಆದರ್ಶಗಳ ಸುರಮ್ಯ ಚಿತ್ರವನ್ನು ಚಿತ್ರಿಸಿ ಅದರಲ್ಲಿ ಸಮೃದ್ಧ ಭಾರತವೂ ಬಿಂಬಿತವಾಗುವಂತಾದರೆ ಮಾತ್ರ ಆ ಕಲೆಗೆ ಸಾರ್ಥಕ್ಯ ಲಭಿಸೀತು. ಅಂಥ ಪೂಜೆ ಪರಮಾತ್ಮನ ಪ್ರೀತ್ಯಾದರಗಳಿಗೂ ಪಾತ್ರವಾದೀತು!

* * * * *

ನಮ್ಮ ದೇಶದಲ್ಲಿ ಮೂರ್ತಿ ಪೂಜೆ, ವ್ಯಕ್ತಿ ಪೂಜೆ ಆದಿಕಾಲದಿಂದಲೂ ಬೆಳೆದು ಬಂದ ಸಾಂಪ್ರದಾಯ. ಅದು ಸತ್ ಸಾಂಪ್ರದಾಯವೋ, ರೂಢಿಯ ಮೌಢ್ಯವೋ ಹೇಳಲಿಕ್ಕಾಗದು. ಅವರವರ ಭಾವಕ್ಕೆ ಅವರವರ ದರ್ಶನಕ್ಕೆ ಸಂಬಂಧಿಸಿದ ವಿಚಾರ.

ಭರತ ಖಂಡವು ವಿಶ್ವದ ದೀಗುಂಬವು. ಅವತಾರಿ ಪುರುಷರ ವಿಶ್ವ ವಿಭೂತಿಗಳ ಜನ್ಮಭೂಮಿ ಇದು. ಧರ್ಮ ಗ್ಲಾನಿಯಾದಾಗ ಸಾಮಾಜಿಕ ಶೈಥಿಲ್ಯ ನೈತಿಕಪತನ ವುಂಟಾದಾಗ ಮಹಾಪುರುಷರು ಹುಟ್ಟಿ, ಧರ್ಮ ಸಮಾಜ ಮತ್ತು ನೈತಿಕ ಸುಧಾರಣೆ ಮಾಡಿ ಹೋಗಿದ್ದಾರೆ. ಲೋಕ ಕಲ್ಯಾಣ ಸಾಧಿಸಲು ಹೊರಟ ಮಹಾಪುರುಷರು ತಮ್ಮ ಜೀವಮಾನದಲ್ಲಿ ಬಗೆಬಗೆಯ ಸಂಕಟಗಳಿಗೆ ಗುರಿಯಾದುದು ಇತಿಹಾಸದಿಂದ ತಿಳಿದು ಬರುತ್ತದೆ. ಸಾಂಪ್ರದಾಯವಾದಿಗಳು ಪಟ್ಟಭದ್ರರು ಹೊಸ ಸುಧಾರಣೆಗಳನ್ನು ವಿರೋಧಿಸುವುದು ಸ್ವಾಭಾವಿಕವಾಗಿದೆ. ಯಾವ ಜನಾಂಗವನ್ನು ಉದ್ಧರಿಸಲು ಅವರು ಬಂದಿರುವರೋ, ಆ ಜನಾಂಗವೇ ಅವರನ್ನು ಹಿಂಸೆಗೆ ಗುರಿಮಾಡಿದ ನಿದರ್ಶನಗಳುಂಟು. ಲೋಕದಲ್ಲಿ ಮಹಾತ್ಮರನ್ನು ದೋಷಾರೋಪಣೆಗೆ, ಹಿಂಸೆಗೆ, ಗುರಿ ಮಾಡುವುದು ಸಹಜವಾಗಿದೆ. ಈ ಮಾತನ್ನು ಸಾವಿರಾರು ವರ್ಷಗಳ ಹಿಂದೆ ಸಾಕ್ರೆಟೀಸನೇ ಹೇಳಿದ್ದಾನೆ.

'ಮಹಾತ್ಮಾ ಗಾಂಧೀಜಿ ಜನ್ಮ ಶತಾಬ್ದಿ' ಮಹೋತ್ಸವವು ಒಂದು ವಾರದವರೆಗೆ ವಿಶೇಷ ವಿಜೃಂಭಣೆಯಿಂದ ವೈಭವ ಪೂರ್ಣವಾಗಿ ದೇಶದ ಸಮಗ್ರಭಾಗದಲ್ಲಿ ಹಾಗು ಪ್ರಪಂಚದ ಬಹು ರಾಷ್ಟ್ರಗಳಲ್ಲಿಯೂ ಆಚರಿಸಲಾಯಿತು. ನಮ್ಮಲ್ಲಿಯೂ ಈ ಸಮಾರಂಭದ ಅಂಗವಾಗಿ ಶಾಲಾ ಬಾಲಕರಿಂದ ಪ್ರಭಾತಫೇರಿ ಮಹಾ

ತ್ಮಾಜಿಯವರ ಭಾವಚಿತ್ರದ ವೈಭವದ ಮೆರವಣಿಗೆ, ವಾದ್ಯ ಮೇಳಗಳೊಂದಿಗೆ ಜರುಗಿಸಲಾಯಿತು. ಆನಂತರ ಅವರ ಜೀವನ ಚರಿತ್ರೆ ಮತ್ತು ತತ್ತ್ವಗಳ ಬಗೆ ಉಪನ್ಯಾಸ, ಗೀತೆ ಹಾಡು ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳು ಸಾಂಗವಾಗಿ ಸಾಗಿದವಷ್ಟೇ.

ನಾವು ಅವರನ್ನು "ರಾಷ್ಟ್ರಪಿತಾ ಬಾಪೂಜಿ" ಎಂದು ಪ್ರೀತಿಯಿಂದ ಕರೆದು ಮಹಾತ್ಮ ಬುದ್ಧದೇವ, ಮಹಾನುಭಾವ ಬಸವಣ್ಣನವರಂತಹ ವಿಭೂತಿ ಪುರುಷರ ಪಂಕ್ತಿಯಲ್ಲಿ ನಿಲ್ಲಿಸುತ್ತೇವೆ. ಅವರ ಭಾವ ಚಿತ್ರಗಳನ್ನು ಪೂಜಿಸುತ್ತೇವೆ. ಅವರ ಸಾಕಾರ ಮೂರ್ತಿಯ ಸ್ಮಾರಕ ನಿಲ್ಲಿಸುತ್ತೇವೆ. ಅವರ ಸಂಕೀರ್ತನೆ ಸ್ತೋತ್ರ ಅತಿರಂಜಿತವಾಗಿಯೂ, ಆವೇಶದಿಂದಲೂ ತನುಮನ ತಣಿಯುವಂತೆ ದಣಿಯುವಂತೆ ಮಾಡುತ್ತೇವೆ. ಇಷ್ಟಾದರೆ ಸಾಕು, ಮುಗಿಯಿತು ನಮ್ಮ ಆರಂಭ ಶೂರತನ. ಆದರೆ ಅವರ ಜೀವನದ ಉಸಿರಾದ 'ಸತ್ಯ ಅಹಿಂಸೆ' ಯಂತಹ ಮುಖ್ಯ ತತ್ತ್ವಗಳನ್ನು ಎಷ್ಟು ಜನರು ತಮ್ಮ ಜೀವನದಲ್ಲಿ ಎಷ್ಟರ ಮಟ್ಟಿಗೆ ಆಚರಣೆಯಲ್ಲಿ ತಂದಿದ್ದಾರೆ? ಎಂದು ಅನೇಕರು ಸವಾಲು ಹಾಕುತ್ತಾರೆ. ವಾಸ್ತವಿಕವಾಗಿ ವಿಚಾರಿಸುವಂತಹ ಸಮಸ್ಯೆ ಇದು.

ನಮ್ಮ ದೇಶದಲ್ಲಿ ತತ್ತ್ವಾನುಸರಣೆಗಿಂತ ಪರೋಪದೇಶ ಮಾಡುವ ಚಟ ಹೆಚ್ಚಾಗಿದೆ. ಮಹಾನುಭಾವರ ತತ್ತ್ವಗಳನ್ನು ಬಾಯಿಂದ ಹೇಳುತ್ತ ಆಚರಣೆಯಿಂದ ವಿಮುಖರಾಗುತ್ತಾರೆ.

ಈ ಮಹಾ ಸಾತ್ವಿಕ ಪುರುಷನ ಜನ್ಮ ಶತಾಬ್ದಿ ಅವಧಿಯಲ್ಲಿಯೇ ಅವರ ಜನ್ಮ ಭೂಮಿಯಾದ ಗುಜರಾತ ಪ್ರಾಂತದ ಕೆಲವು ಕಡೆ, ಅಹ್ಮದಾಬಾದ ನಗರದಲ್ಲಿಯೂ ಜಾತಿ ಗಲಭೆ. ಕೋಮುವಾರು ದಂಗೆ, ಕೊಲೆ ಸುಲಿಗೆ ಸಾರ್ವಜನಿಕರ ಸೊತ್ತುಗಳನ್ನು ನಾಶಮಾಡುವುದು ಮುಂತಾದ ಹೇಯ ಕೃತ್ಯಗಳು ದೇಶದ್ರೋಹಿಗಳಿಂದ ಜರುಗಿ ಹೋದವು. ಈ ರೀತಿಯಾಗಿ ದೇಶದಲ್ಲಿ ಪ್ರಾಂತೀಯ ದ್ವೇಷದಿಂದ, ಭಾಷಾ ದ್ವೇಷದಿಂದ ಸ್ವಾತಂತ್ರ್ಯದ ನಂತರ ಗಲಭೆ ದಂಗೆಗಳು ಹೆಚ್ಚಾಗಿ ತಲೆಯೆತ್ತಿವೆ. ಅವುಗಳ ಮೂಲಕಾರಣ. ಆಗ್ಗಾಗೆ ರಾಷ್ಟ್ರದ ಧುರೀಣರು ಪರಿಶೀಲನೆ ಮಾಡುತ್ತಿದ್ದಾರೆ. ದೇಶದಲ್ಲಿ ಆಂತರಿಕ ಕ್ಷೋಭೆಯನ್ನುಂಟು ಮಾಡಲು ಮತ್ತು ದೇಶದ ಹೆಸರನ್ನು ಕೆಡಿಸಲು ಹೊರಗಿನ ದುಷ್ಟ ಶಕ್ತಿಗಳ ಮತ್ತು ಕಿಡಿ

ಗೇಡಿ ವ್ಯಕ್ತಿಗಳ ಕೈವಾಡದಿಂದ ಸುಸಂಘಟಿತ ಪ್ರಯತ್ನಗಳು ನಡೆದು ದುರ್ಘಟನೆಗೆ ಕಾರಣವಾಗಿದೆಯೆಂದು ಖಚಿತವಾಗಿ ತಿಳಿದು ಬಂದಿದೆ.

ವಿದ್ಯಾವಂತರೂ ಒಂದು ಕಡೆ ಸದಸದ್‌ವಿವೇಕದ ಮಾತನಾಡುವುದು, ಇನ್ನೊಂದೆಡೆ ಅನಾಚಾರ ಮಾಡುವುದು, ಆಡುವದೊಂದು, ಮಾಡುವದೊಂದು, ಮೇಲೆ ಉಪಚಾರ ಒಳಗೆ ಅಪಚಾರ ಹೀಗೆ ಮಾಡಿದರೆ ಅವಿದ್ಯಾವಂತರ ಪಾಡೇನು? ಈ ರೀತಿಯಾಗಿ ಎರಡು ಮುಖಗಳುಳ್ಳ ನಡತೆಯಾದರೆ ಏನು ಪ್ರಯೋಜನ? ಆಡಂಬರ ಪ್ರಿಯರಾಗಿ ಅಹಂಕಾರದಿಂದ ಉಬ್ಬಿ ಗೊಡ್ಡುಸಾಂಪ್ರದಾಯ ಶರಣರಾಗಿ ಅವರ ಭಾವ ಚಿತ್ರದ ಮೆರವಣಿಗೆ ಮಾಡಿದರೆ ಅವರ ಆತ್ಮಕ್ಕೆ ಶಾಂತಿ ದೊರಕೀತೇ?

ಪರದೇಶದವರು ಭಾರತಕ್ಕೆ 'ಗಾಂಧಿ ದೇಶ' 'ನೆಹರು ರಾಷ್ಟ್ರ' ಎಂದು ಗೌರವ ಸಲ್ಲಿಸಿ ಅನೇಕ ತರದ ಸಹಾಯ ಸಹಕಾರ ನೀಡುವರು. ಆದರೆ 'ಮಹಾತ್ಮಾಜೀ'ಯವರು ಕೊಲೆಯಾದುದು ಒಬ್ಬ ಸುಶಿಕ್ಷಿತ ಭಾರತದ ದೇಶದ್ರೋಹಿಯಿಂದಲ್ಲವೆ? ಇನ್ನುಳಿದ ದ್ರೋಹಿಗಳು ಯಾವುದೋ ನೆಪದಿಂದ ಅವರ ಜೀವನದ ಉಸಿರಾದ ಸತ್ಯ ಅಹಿಂಸೆಯ ಕಗ್ಗೊಲೆ ಮಾಡಲು ಹೊರಟಿರುವರು. ಹೀಗೆ ತಿಳಿದು ತಿಳಿದೂ ಗಾಂಧೀ ಮಾರ್ಗವನ್ನು ಅನುಸರಿಸದೆ ಅವರ ತತ್ತ್ವಗಳನ್ನು ಗಾಳಿಗೆ ತೂರಿ, ತೋರಿಕೆಗೆ ಮಹಾತ್ಮರ ಪೂಜಿಸುವ ಅಪರಾಧ ಮಾಡಿದಂತಾಗುವದಿಲ್ಲವೇ ಈ ಕೃತಿ?

ಭಾರತೀಯರಲ್ಲಿ ತತ್ತ್ವನಿಷ್ಠೆಗಿಂತ ವ್ಯಕ್ತಿ ಪೂಜೆ ಹೆಚ್ಚಾಗಿದೆ. ನಾವು ಅವರ ತತ್ತ್ವಗಳನ್ನು ಮರೆತು ಅವರ ವಿಗ್ರಹ ಪೂಜೆಗೆ ಮಹತ್ವ ಕೊಟ್ಟಿದ್ದೇವೆ. ವ್ಯಕ್ತಿ ನಿಷ್ಠೆ ಅತಿ ಹೆಚ್ಚಾಗಿ ತಲೆ ಹಾಕಿದಲ್ಲಿ ತತ್ತ್ವ ನಿಷ್ಠೆ ಹಿಂದು ಬೀಳುವುದು ಐತಿಹಾಸಿಕ ಸತ್ಯ?

ಸಂತ ವಿನೋಬಾ ಭಾವೆಯವರು ಹೀಗೆ ಹೇಳುತ್ತಾರೆ. 'ದೇವನಿರುವುದು ದೇಗುಲದಲ್ಲಲ್ಲ. ಜನತೆಯ ಎದೆಯಗುಡಿಯಲ್ಲಿ. ದೀನ ದರಿದ್ರರ, ದುಃಖಿಗಳ, ರೋಗಿಗಳ ಸೇವೆಗಿಂತ ಬೇರೆ ದೈವ ಸೇವೆ ಇಲ್ಲ. ಅಳುವವನ ಕಂಬನಿಯನ್ನು ತೊಡೆದು ಹಾಕಿ ನಗುವಂತೆ ಮಾಡಿ ಅವನ ನೊಂದ ಹೃದಯಕ್ಕೆ ನಲಿವನ್ನು ತುಂಬುವದೇ ಹೆಚ್ಚಿನ ದೇವ ಪೂಜೆ.'

ಇಂದು ಮಹಾತ್ಮಗಾಂಧಿಯವರ ಭೌತಿಕ ಶರೀರ ನಮ್ಮೆದುರಿಗಿಲ್ಲ. ಅವರ

ಅನುಪಮ ತ್ಯಾಗ, ವಿಶ್ವಪ್ರೇಮ, ಸೇವೆ, ತಪಸ್ಸು, ಸತ್ಯ, ಅಹಿಂಸೆ ನ್ಯಾಯನಿಷ್ಠತೆ ಮುಂತಾದ ದಿವ್ಯ ತತ್ತ್ವಗಳನ್ನು ಅನುಷ್ಠಾನದಲ್ಲಿ ತಂದು ಆದಗಂತೆ 'ಅಮರ'ರೆನಿಸಿ ಕೊಂಡರೆ ಜೀವನ ಸಾರ್ಥಕವಾದೀತು.

ಪಾಶ್ಚಾತ್ಯರು ವ್ಯಕ್ತಿ ಪೂಜೆಗಿಂತ ತತ್ತ್ವನಿಷ್ಠೆಗೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದ್ದಾರೆ. ಅವರ ಕ್ರಿಯಾ ಶೀಲತೆಯಲ್ಲಿ ಶ್ರದ್ಧೆಗೆ, ಎಳ್ಳಷ್ಟೂ ಎಡೆಯಿಲ್ಲ. ಅಂತೆಯೇ ಅವರು ವೈಜ್ಞಾನಿಕ ಅನುಭವದ ತಳಹದಿಯ ಮೇಲೆ ಪ್ರಾಯೋಗಿಕ ದೃಷ್ಟಿಯಿಂದ ತತ್ತ್ವಜ್ಞಾನ ಬೆಳಸಿಕೊಂಡು ಆಗಾಧವಾದ ಬಹುಮುಖ 'ಯಾಂತ್ರಿಕ' ಪ್ರಗತಿ ಸಾಧಿಸಿದ್ದಾರೆ. ಮತ್ತು ಸಾಗಿಸುತ್ತಲಿದ್ದಾರೆ ಸದ್ಯದಲ್ಲಿ ಅವರ ಪ್ರಗತಿಯ ಮುನ್ನಡೆ ಚಂದ್ರಲೋಕ ತಲುಪಿದೆ.

ಯಾವುದೇ ರಾಷ್ಟ್ರದ ಪ್ರಗತಿಯು ಅಲ್ಲಿಯ ಜನರ ಶಿಕ್ಷಣದೊಂದಿಗೆ ಕ್ರಿಯಾಶೀಲತೆಯೂ ನಿಕಟ ಸಂಬಧ ಪಡೆದಿದೆ ಅಮೇರಿಕಾ, ರಶ್ಯಾ ಮುಂತಾದ ದೇಶಗಳಲ್ಲಿ ನೂರಕ್ಕೆ ೯೦ ರಿಂದ ೯೫ ರಷ್ಟು ಜನರು ಶಿಕ್ಷಣ ಹೊಂದಿದ್ದು ಎಲ್ಲ ವೈಜ್ಞಾನಿಕ ಸತ್ಯಗಳನ್ನು ಅನುಷ್ಠಾನಕ್ಕೆ ತಂದು ಕಾರ್ಯ ಪ್ರವೃತ್ತರಾಗಿ ಬಹುಮುಖ ಪ್ರಗತಿ ಸಾಧಿಸಿದ್ದಾರೆ. ಆದರೆ ನಮ್ಮ ದೇಶದಲ್ಲಿ ಪ್ರತಿ ಶತ ೨೦ ರಿಂದ ೨೫ ರಷ್ಟು ಮಾತ್ರ ಕೇವಲ ಓದು ಬರಹ ಬಲ್ಲವರಾಗಿದ್ದಾರೆ.

ಭಾರತ ದೇಶವು ಪುರಾತನ ಕಾಲದಿಂದಲೂ ಕೃಷಿ ಪ್ರಧಾನ ದೇಶವಿದ್ದಾಗ್ಯೂ ಸಂಶೋಧನೆ ಮತ್ತು ಪ್ರಯೋಗದಿಂದ ಉತ್ತಮ ಸುಧಾರಿಸಿದ ಬೇಸಾಯ ಪದ್ಧತಿಗಳನ್ನು ಬಹಳಷ್ಟು ರೈತರು ಇನ್ನೂ ಬಳಕೆಯಲ್ಲಿ ತಂದಿಲ್ಲ. ನೂರಕ್ಕೆ ೭೦ ರಷ್ಟು ಜನರು ಒಕ್ಕಲತನದಲ್ಲಿ ತೊಡಗಿದ್ದಾರೆ ಆದರೂ ಅವರು ಬೆಳೆಸುವ ಆಹಾರ ದೇಶಕ್ಕೆ ಸಾಲುವಂತಿಲ್ಲ. ಸದ್ಯಕ್ಕೆ ರೂಢಿಯಲ್ಲಿರುವ ಎಲ್ಲಾ ಹಳೇ ಪದ್ಧತಿಗಳನ್ನು ಮಾರ್ಪಡಿಸಿ ಸುಧಾರಿಸಿದ ಬೇಸಾಯ ಪದ್ಧತಿಗಳನ್ನು ಅನುಸರಿಸುವದು ಸರ್ಕಾರದ ಉದ್ದೇಶ. ಆದರ ಇಂಗಿತವನ್ನು ಅರಿತುಕೊಂಡು ವೈಜ್ಞಾನಿಕ ತತ್ತ್ವಗಳನ್ನು ವಿವಿಧ ಉದ್ಯೋಗಗಳಲ್ಲಿ ಅನುಸರಿಸಿದರೆ ರಾಷ್ಟ್ರದ ಕಲ್ಯಾಣವಾದೀತು ? ವ್ಯಕ್ತಿ ಪೂಜೆಗಿಂತ ಕುಶಲ ಕರ್ಮಕ್ಕೇ ಪ್ರಾಧಾನ್ಯತೆಯಿತ್ತ ಮಹಾತ್ಮರ ಆತ್ಮಕ್ಕೂ ತೃಪ್ತಿ ಲಭಿಸೀತು !



# ವಿರಹಿ

ಮುತ್ತಿನಂಥ ಮಾತಿನಿಂದ
ಎತ್ತ ನಿನು ತಿಳಿಯದಂತೆ
ಪಾತ್ರನಾಗಿ ಮಾಡಿ ನನ್ನ
ಚಿತ್ತವನ್ನು ಸೂರೆಗೊಂಡೆ

ಚಂಚಲಾಕ್ಷಿ ನಿನ್ನ ರೂಪ
ಮಿಂಚಿತೆನ್ನ ಹೃದಯದಲ್ಲಿ
ಹಂಚಿ ಹೋದ ಮನವು ಮತ್ತೆ
ಮುಂಚಿನಂತೆ ಏಕವಾಯ್ತು

ಕಮಲ ನಯನೆ ನಿನ್ನ ವದನ
ಕಮಲಕಿಂತ ಮಿಗಿಲು ನೋಡು
'ತುಮುಲ' ನೆಬ್ಬಿಸುವದು ಮನದಿ
ಅಸುಲು ಹಿಡಿಯುವಂತೆ ಮಾಡಿ

ಕೆಲವು ಕ್ಷಣದ ನಿನ್ನ ಮಿಲನ
ಕೊಲಮಿಗೆಣಿಸಿತೆನ್ನ ಮನವ
ಹಲುಬುತಿರುವೆ ತಿರುಗಿ ಪಡೆಯೆ
ಚೆಲುವೆ ನಿನ್ನ 'ವಲನ, ಮಿಲನ

ಬಾರೆ ನನ್ನ 'ಹೃದಯ ರಾಣಿ,
ಬಾರೆ ನನ್ನ 'ನಾಗವೇಣಿ,
ಬಾರೆ ನನ್ನ 'ವೀಣಾಪಾಣಿ,
ಬಾರೆ ತಿರುಗಿ ಮನವ ತಣಿಯೆ

ನಿನ್ನ ವಿರಹದಿಂದ ಪಡೆದ
ನನ್ನ ಮನದ ಅಂಧಕಾರ-
ವನ್ನು ತೊಳೆದು ಬೆಳಗು ಬಾರೆ
'ಚಿನ್ನ' ತಡವ ಮಾಡದಂತೆ

ರನ್ನೆ ನಿನ್ನ ತಿರುಗಿ ಪಡೆಯು
ಲಿನ್ನ ಮನವು ತವಕಗೊಳಲು
ಅನ್ನಪಾನ ಬಿಟ್ಟು ಈಶ
ನನ್ನು ದಿನವು ನುತಿಸುತಿರುವೆ

ಬಾಳಶಾಸ್ತ್ರಿ ದೋರನಹಳ್ಳಿ.

## ಮಿಂಚು ಹನಿ

ಸೂರ್ಯ ರಶ್ಮಿಯಪ್ಪುಗೆ
ಅರಳು ಹೂವಿಗೊಪ್ಪಿಗೆ
ಒಲವು ಸ್ಪಂದ ಸೃಷ್ಟಿಗೆ

– ಇಟಗಿ ರಾಘವೇಂದ್ರ

# ಸಂಪಾದಕೀಯ

## ಕುಟುಂಬಯೋಜನೆ

ಭಾರತದಲ್ಲಿ ದಿನೇದಿನೇ ಜನಸಂಖ್ಯೆ ಮಿತಿ ಮೀರುತ್ತಿರುವುದನ್ನು ಕಂಡು ಸರಕಾರ ಕುಟುಂಬ ಯೋಜನೆಯ ಕ್ರಮವನ್ನು ಕೈಕೊಂಡು ಜನನ ನಿಯಂತ್ರಣ ಸಾಧಿಸಲು ಪ್ರಯತ್ನಿಸತೊಡಗಿದೆ. ಹಿತಬಲ ಹಾಗೂ ಹತವೀರ್ಯ ಮಕ್ಕಳ ಸಂಖ್ಯೆ ಹೆಚ್ಚುವುದಕ್ಕಿಂತ ಮಿತ ಸಂತಾನ ಹೊಂದುವುದು ಒಳ್ಳೆಯದು. ಲಭ್ಯವಾಗುವ ಸಂಪನ್ಮೂಲಗಳಿಂದ ಅವರ ಪೋಷಣೆ, ವಿದ್ಯಾಭ್ಯಾಸ ಮುಂತಾದುದನ್ನು ನೆರವೇರಿಸಲು ಪಾಲಕರಿಗೂ ಸಾಧ್ಯ. ಸರಕಾರಕ್ಕೂ ಸಾಧ್ಯ. ಒಂದು ಕಾಲದಲ್ಲಿ ಹೆಣ್ಣು ಮಕ್ಕಳನ್ನು ಹರಸುವಾಗ 'ಅಷ್ಟಪುತ್ರ ಸೌಭಾಗ್ಯವತೀ ಭವ!' ಎಂದು ಹೇಳುವ ವಾಡಿಕೆಯಿತ್ತು. ಸುಭಿಕ್ಷ ಕಾಲದಲ್ಲಿ ಆ ಮಾತು ಸರಿಹೋಗುವಂತಿತ್ತು. ಈಗ ಮೂರೋ ನಾಲ್ಕೋ ಮಕ್ಕಳು ಸಾಕೆಂದು ಪ್ರತಿಯೊಬ್ಬನೂ ತಿಳಿದುಕೊಂಡಿದ್ದಾನೆ. ಆರ್ಥಿಕ ಸ್ಥಿತಿಯ ಏರುಪೇರಿನಿಂದಾಗಿ ಸರಕಾರವಂತೂ ಎರಡೇ ಮಕ್ಕಳು ಸಾಕು. ಒಂದು ವೇಳೆ ಎರಡೂ ಹೆಣ್ಣೇ ಹುಟ್ಟಿದರೆ ಅವೂ ಒಂದು ಗಂಡಿಗೆ ಸಮಾನ' ಎಂದು ತಿಳಿದುಕೊಳ್ಳಿರಿ ಎನ್ನುವ ಸ್ಥಿತಿಗೆ ಬಂದಿದೆ. ಕುಟುಂಬಯೋಜನೆಯನ್ನು ಎಲ್ಲರೂ ಮೆಚ್ಚಿದ್ದಾರೆ. ಆದರೆ ಕೆಲವರು ಈಗ ಬಳಕೆಯಲ್ಲಿರುವ ಕುಟುಂಬ ಯೋಜನಾ ವಿಧಾನವನ್ನು ಮಾತ್ರ ಮನಃಪೂರ್ವಕ ಮೆಚ್ಚಿಕೊಂಡಿಲ್ಲ. 'ಈ ವಿಧಾನ ಅನೈತಿಕತೆಯ ಕಡೆಗೂ. ಉಚ್ಛೃಂಖಲವೃತ್ತಿಗೂ ದಾರಿಮಾಡಿಕೊಡುತ್ತಿದೆ' ಎಂದು ಅವರು ನುಡಿಯುತ್ತಲಿದ್ದಾರೆ. ಪೂಜ್ಯ ವಿನೋಬಾ ಭಾವೆಯಂತಹ ಸಂತ ಶ್ರೇಷ್ಠರೂ, ಅವರ ಅನುಯಾಯಿಗಳೂ ಬೇರೊಂದು ಮಾರ್ಗವನ್ನು ತೋರಿಸುತ್ತಲಿದ್ದಾರೆ. ಆ ಮಾರ್ಗ ಕೆಟ್ಟದೆಂದು ಯಾರೂ ನುಡಿಯಲಾರರು. ಆದರೆ ಆ ಮಾರ್ಗದತ್ತ ಸ್ವಸಂತೋಷದಿಂದ ಹೋಗತಕ್ಕವರು ಎಷ್ಟು ಜನ? ಸರಕಾರ ಶಿಕ್ಷಣದಲ್ಲೇ ಒಂದು ಕ್ರಾಂತಿ ತಂದರೆ, ಧಾರ್ಮಿಕ ಮತ್ತು ನೈತಿಕ ಮೌಲ್ಯಗಳಿಗೆ ಪುನಶ್ಚೇತನ ಕೊಟ್ಟರೆ ಆ ಕಾರ್ಯ ಅಸಾಧ್ಯವಾದುದೇನಲ್ಲ! ಅಂತಹ ಮನಃಪರಿವರ್ತನೆ ಮಾಡಲು ಸರಕಾರದೊಡನೆ ಸಮಾಜವೂ ಸೇರಬೇಕು. ಧಾರ್ಮಿಕ ಮುಂದಾಳುಗಳು ಅವರಿಗೆ ಮಾರ್ಗದರ್ಶನವನ್ನೀಯಬೇಕು. ಕೀಳು ಮಟ್ಟದ ಚಲನಚಿತ್ರ, ನಾಟಕ ಮನರಂಜನೆಯ ಇತರ ಕಾರ್ಯಕ್ರಮ ಮುಂತಾದವುಗಳನ್ನು ನಿಲ್ಲಿಸಿಬಿಡಬೇಕು. ಅಂದಾಗ ಕುಟುಂಬ ಯೋಜನೆಗಾಗಿ ಸರಕಾರ ಇಂದು ವೆಚ್ಚಮಾಡುತ್ತಿರುವ ಹಣದ ಅರ್ಧ ಭಾಗವನ್ನೂ ವೆಚ್ಚಮಾಡುವ ಸ್ಥಿತಿ ಒದಗುವುದಿಲ್ಲ.

ಮಹಾತ್ಮಾಗಾಂಧಿಯವರಾಗಲೀ ಪೂಜ್ಯ ವಿನೋಬಾರವರಾಗಲಿ, ಕೋರಿದ

ತೋರುತ್ತಿರುವ ಆದರ್ಶ ಪುರಾತನವಾದ ಆದರ್ಶ; ಅಚ್ಚಳಿಯದೇ ಸದಾ ಕಾಲವೂ ಅನುಸರಿಸುವ ಆದರ್ಶ ನೈತಿಕ ಅಧಃಪತನ ನಡೆದ ಈ ಕಾಲದಲ್ಲಿ ಆ ಆದರ್ಶಗಳು ಬಹುಬೇಗ ಮನ ಸೆಳೆಯಲಾರವು. ಕಾರಣ ಸಾಮೂಹಿಕ ಪ್ರಯತ್ನದಿಂದ ಅದನ್ನು ಸಾಧಿಸಲು ಪ್ರಯತ್ನಿಸಬೇಕು. ಅಲ್ಲಿಯವರೆಗೆ ಮಾತ್ರ ಈ ವಿಧಾನ ಅನಿವಾರ್ಯವಾದದ್ದು.

## ವಾಯಲೆಟ್ ಆಳ್ವಾರ ಆಕಸ್ಮಿಕ ನಿಧನ

ತೀರ ಇತ್ತೀಚಿನ ವರೆಗೆ ರಾಜ್ಯ ಸಭೆಯ ಉಪಸಭಾಪತಿಗಳಾಗಿದ್ದ ಶ್ರೀಮತಿ ವಾಯಲೇಟ ಆಳ್ವಾರು ದಿನಾಂಕ ೨೧–೧೧–೧೯೬೯ ಶುಕ್ರವಾರ ಬೆಳಗ್ಗೆ ೭–೪೫ ಕ್ಕೆ ತಮ್ಮನಿವಾಸದಲ್ಲಿ ಹೃದಯ ವಿಕಾರದಿಂದ ನಿಧನ ಹೊಂದಿದರು.

ಶ್ರೀಮತಿ ವಾಯಲೆಟ್ ಆಳ್ವರು ೧೯೫೨ ರಲ್ಲಿ ರಾಜ್ಯಸಭೆಯ ಸದಸ್ಯರಾಗಿ ಮೈಸೂರು ರಾಜ್ಯದಿಂದ ಆರಿಸಿ ಬಂದಿದ್ದರು. ಕಳೆದವಾರ ಇವರು ರಾಜ್ಯಸಭೆ ಉಪಸಭಾಪತಿ ಸ್ಥಾನಕ್ಕೆ ರಾಜೀನಾಮೆ ಕೊಟ್ಟದ್ದು ಇವರನ್ನು ಕೇಂದ್ರ ಸಂಪುಟದಲ್ಲಿ ಸೇರಿಸಿಕೊಳ್ಳಲಾಗುವುದು, ಇಲ್ಲವೆ ರಾಜ್ಯಪಾಲರನ್ನಾಗಿ ನೇಮಿಸಲಾಗುವದೆಂದು ಲಾಬಿ ವರ್ಗಗಳಲ್ಲಿ ಊಹಾಪೋಹ ನಡೆದಿತ್ತು. ಇವರ ಆಕಸ್ಮಿಕ ನಿಧನದಿಂದ ಭಾರತೀಯ ರಾಜಕೀಯ ಕ್ಷೇತ್ರಕ್ಕೆ ತುಂಬಾ ಹಾನಿಯಾಗಿದೆ. ಅಷ್ಟೇ ಕನ್ನಡ ನಾಡಿಗೂ ತುಂಬಿಬಾರದ ಹಾನಿ.

ಶ್ರೀಮತಿ ಆಳ್ವಾರು ತಮ್ಮ ಹಿಂದೆ ಪತಿ, ಇಬ್ಬರೂ ಗಂಡು ಮಕ್ಕಳು ಹಾಗೂ ಒರ್ವ ಮಗಳನ್ನು ಬಿಟ್ಟು ಅಗಲಿದ್ದಾರೆ.

ಶಿಕ್ಷಣ, ಕಾಯಿದೆ, ಪತ್ರಿಕೋದ್ಯಮ ಮತ್ತು ರಾಜಕೀಯದ ಉತ್ತಮ ಹಿನ್ನೆಲೆಯಿಂದ ಶ್ರೀಮತಿ ಆಳ್ವರು ೧೯೫೭ ರಲ್ಲಿ ದಿ. ಜವಾಹರಲಾಲರ ಸಂಪುಟದಲ್ಲಿ ಹಾಗೂ ದಿ. ಲಾಲಬಹಾದ್ದೂರ ಶಾಸ್ತ್ರೀ ಸಂಪುಟದಲ್ಲಿ ಗೃಹಖಾತೆಯಉಪಮಂತ್ರಿಗಳಾಗಿದ್ದರು ದೇವರು ಅವರ ಆತ್ಮಕ್ಕೆ ಶಾಂತಿಯನ್ನೀಯಲಿ ಮತ್ತು ಅವರ ಬಂಧು ವರ್ಗಕ್ಕೆ ತಾಳ್ಮೆಯನ್ನು ದಯಪಾಲಿಸಲಿ !

## ಸಂತಾಪ

ಮಹಾರಾಷ್ಟ್ರದ ರಾಜ್ಯಪಾಲರಾಗಿದ್ದ ಡಾ. ಪಿ. ವಿ. ಚೆರಿಯನ್ನರ ಆಕಸ್ಮಿಕ

ನಿಧನಕ್ಕಾಗಿ ದೇಶಕ್ಕೆ ದೇಶವೇ ಸಂತಾಪವನ್ನು ವ್ಯಕ್ತಗೊಳಿಸುತ್ತದೆ. ಅವರು ಸುಪ್ರಸಿದ್ಧ ವೈದ್ಯರಷ್ಟೇ ಅಲ್ಲ, ಒಳ್ಳೆಯ ರಾಜಕಾರಣಿಗಳೂ ಆಗಿದ್ದರು. ಮಹಾರಾಷ್ಟ್ರದಂತಹ ರಾಜ್ಯದಲ್ಲಿದ್ದೂ ತಮ್ಮ ಪ್ರತಿಭೆ ಮತ್ತು ಪಾಂಡಿತ್ಯದ ಬಲದಿಂದಲೂ, ಸುಸ್ವಭಾವದಿಂದಲೂ ಅಲ್ಲಿಯ ಜನರನ್ನು ಆಕರ್ಷಿಸಿದ್ದರು. ಇಂಥ ಸಂದಿಗ್ಧ ಕಾಲದಲ್ಲಿ ಅಂಥ ತೂಕದ ಜನರ ಆವಶ್ಯಕತೆ ದೇಶಕ್ಕೆ ಅಗತ್ಯವಾಗಿತ್ತು. ದೈವ ಅದನ್ನು ಕಸಿದು ಕೊಂಡದ್ದಕ್ಕಾಗಿ ಮರುಗಬೇಕಾಗಿದೆ. 'ದೇವರು ಅವರ ಆತ್ಮಕ್ಕೆ ಚಿರಶಾಂತಿಯನ್ನೀಯಲಿ, ಅವರ ಕುಟುಂಬ ವರ್ಗಕ್ಕೆ ತಾಳ್ಮೆ ದಯಪಾಲಿಸಲಿ' ಎಂದು ಪ್ರಾರ್ಥಿಸದೇ ವಿಧಿಯಿಲ್ಲ.

## ಪೆಟ್ಟಿನ ಮೇಲೆ ಪೆಟ್ಟು

ಶ್ರೀ ಡಾ. ಆ. ಹಲಸೀಕರರ ನಿಧನವೂ ಅಷ್ಟೇ ದುಃಖದಾಯಕವು. ಆಯುರ್ವೇದ ಪಥಿಕರೆನಿಸಿಕೊಂಡು ಹೊಸ ಹೊಸ ಪ್ರಯೋಗಗಳಲ್ಲಿ ನಿರತರಾಗಿದ್ದ ಅವರು ನಮ್ಮ ನಾಡಿನ ಒಂದು ದಿವ್ಯ ಆಸ್ತಿಯಾಗಿದ್ದರು. ಅವರ ಕುಟುಂಬದವರಿಗಾದ ದುಃಖದಲ್ಲಿ ನಾವೂ ಸಹ ಭಾಗಿಗಳು. ನಾಡು-ದೇಶ ಮೇಲಿಂದ ಮೇಲೆ ಇಂಥ ಪೆಟ್ಟು ತಿನ್ನುತ್ತಿರುವುದು ಅದಾವ ದೈವೀ ದುರ್ವಿಲಾಸವೋ ?

## ಪಾದಯಾತ್ರೆಗಳು

ಧರ್ಮಕ್ಕೆ ಚ್ಯುತಿಯುಂಟಾಗುತ್ತಿರುವ ಈ ಕಾಲದಲ್ಲಿ ಅಲ್ಲಲ್ಲಿ ಧಾರ್ಮಿಕ ಕಾರ್ಯಗಳು ಜರುಗುತ್ತಿರುವುದು ಧರ್ಮದೃಷ್ಟಿಯಿಂದ ಹಿತಾವಹವೆ! ಜನಕ್ಕೆ ಒಂದು ದಾಹ ಉಂಟಾಗಿದೆ. ಆ ದಾಹ ಎತರದು ? ಎಂಬುದು ತಿಳಿಯದು. ಆದರೆ ಧರ್ಮ ಜಾಗ್ರತಿಯ ಕಾರ್ಯಗಳು ನಡೆದಾಗ ಮಾತ್ರ ಆ ದಾಹ ಶಮನಗೊಳ್ಳುತ್ತದೆ. ಪುರಾಣ, ಪ್ರವಚನ, ಯಾತ್ರೆ, ರಥೋತ್ಸವ, ಭಜನೆ ಮುಂತಾದ ಕಾರ್ಯಕ್ರಮಗಳ ಜೊತೆಗೆ ಧರ್ಮ ಜಾಗ್ರತಿಗಾಗಿ, ಭಕ್ತಿಯ ಜೀವಣಿಗೆಗಾಗಿ ಅಲ್ಲಲ್ಲಿ ಪಾದಯಾತ್ರೆಗಳು ನಡೆದುದು ತುಂಬ ಶ್ಲಾಘನೀಯ! ಅಂತಹದೇ ಒಂದು ಪಾದಯಾತ್ರೆಯನ್ನು, ಫರ್‌ಹತಾಬಾದಿನ ಬಸವ ಭಕ್ತ ಮಹಾ ಮಂಡಳಿಯ ಸಂಚಾಲಕರಾದ ಶ್ರೀ ಕಲ್ಲಪ್ಪ ಶೆಟ್ಟೆಪ್ಪ ಮತ್ತು ಶ್ರೀ ಘೂಳಪ್ಪ ಶಹರ್ ಮುಂತಾದವರು ಷಟ್‌ಸ್ಥಳ ಪಾದಯಾತ್ರೆಯೆಂಬ ಅನ್ವರ್ಥಕ ನಾಮಧೇಯದಿಂದ ಸಂಘಟಿಸಿ, ಪ್ರಾರಂಭದಲ್ಲಿ ಜೇವರಗಿಯ ತಪೋಧನರಾದ ಪೂಜ್ಯ ಶ್ರೀ ಶಾಂತವೀರ ಸ್ವಾಮಿಗಳಿಂದ ಹರಕೆ ಹೊಂದಿ ಮಾರ್ಗದಲ್ಲೆಲ್ಲ 'ಭಕ್ತ' 'ಮಹೇಶ' 'ಪ್ರಸಾದ' 'ಪ್ರಾಣಲಿಂಗಿ' 'ಶರಣ' 'ಐಕ್ಯ' ಎಂಬೀ ವಿಷಯಗಳ ಮೇಲೆ ವಿದ್ವಜ್ಜನರಿಂದ ಉಪನ್ಯಾಸಗಳನ್ನೇರ್ಪಡಿಸಿ, ಬಸವಕಲ್ಯಾಣವನ್ನು ತಲುಪಿ. ಅಲ್ಲಿ

ಪೂಜ್ಯರೂ, ಕರ್ಮಯೋಗಿಗಳೂ ಆದ ದೊಡ್ಡಪ್ಪ ಅಪ್ಪಾ ಇವರ ಘನ ಅಧ್ಯಕ್ಷತೆಯಲ್ಲಿ ಸಮಾರಂಭವನ್ನು ಮುಕ್ತಾಯಗೊಳಿಸಿದು ಧರ್ಮ ಹಾಗೂ ಸಂಸ್ಕೃತಿಯ ಪುನರುತ್ಥಾನದ ದೃಷ್ಟಿಯಿಂದ ಒಂದು ಅಪೂರ್ವ ಹೆಜ್ಜೆ. ನಾಡಿನಲ್ಲೆಲ್ಲ ಇಂಥ ಧಾರ್ಮಿಕ ಕಾರ್ಯಗಳು ಜರುಗಿ ನಾಡ ಜನತೆಯ ನೈರಾಶ್ಯವನ್ನು ಕಳೆಯಲು ದಾರಿದೀಪವಾಗಲೆಂದು ಹಾರೈಸುತ್ತೇವೆ.

*****

## ಅಭಿನಂದನೆಗಳು

ಕನ್ನಡ ರಾಜ್ಯೋತ್ಸವ ದಿನದಂದು ಮೈಸೂರ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ಅಧಿಕಾರವನ್ನು ಸ್ವೀಕರಿಸಿದ, ಕನ್ನಡದ ಪ್ರಸಿದ್ಧ ಸಾಹಿತಿಗಳಲ್ಲೊಬ್ಬರೂ, ಮಾನಸ ಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯ ಮುಖ್ಯಸ್ಥರೂ ಆಗಿ ಅಪಾರ ಸೇವೆಯನ್ನು ಸಲ್ಲಿಸಿದ ಶ್ರೀ. ದೇ. ಜವರೇ ಗೌಡರನ್ನು ಹೃತ್ಪೂರ್ವ ಸ್ವಾಗತಿಸಿ ನಮ್ಮ ಆತ್ಮೀಯ ಅಭಿನಂದನೆಗಳನ್ನು ಸಲ್ಲಿಸುತ್ತೇವೆ.

ಅವರು ಖ್ಯಾತ ಸಾಹಿತಿಗಳಾದಂತೆ ದಕ್ಷ ಉಪಕುಲಪತಿಗಳೂ ಆಗಿ, ಮೈಸೂರ ವಿಶ್ವವಿದ್ಯಾನಿಲಯದಲ್ಲಿ ತಮ್ಮ ಗುರುವರ್ಯರಾದ ಕುವೆಂಪುರವರು ಕನ್ನಡದ ಕಹಳೆಯನ್ನು ಊದಿದ ಹಾಗೆ ತಾವೂ ಅವರ ಮುನ್ನಡೆಗಾಗಿ ಶ್ರಮಿಸಿ ಕನ್ನಡಿಗರ ಪ್ರೀತಿ ವಾತ್ಸಲ್ಯಗಳಿಗೆ ಪಾತ್ರರಾಗಬೇಕೆಂಬುದಾಗಿ ಕೇಳಿಕೊಳ್ಳುತ್ತೇವೆ.

ಕನ್ನಡದ ನೆಲದಲ್ಲಿಯೇ ಕನ್ನಡ ತಾಯಿ ತಬ್ಬಲಿಯಾಗಿದ್ದಾಳೆ. ಆಕೆಗೆ ಸಲ್ಲಬೇಕಾದ ಗೌರವ ಪುರಸ್ಕಾರಗಳು ದೊರೆಯುತ್ತಿಲ್ಲ. ಈ ದಿಸೆಯಲ್ಲಿ ಅಂದರೆ ಆಡಳಿತದಲ್ಲೂ, ಅಧ್ಯಯನ, ಅಧ್ಯಾಪನದಲ್ಲೂ, ವಿವಿಧ ಸಮಾರಂಭಗಳಲ್ಲಿಯೂ ನಮ್ಮ ನಲ್ನುಡಿ ತಲೆಯೆತ್ತಿ ಮೆರೆಯುವಂತಾದರೆ ದೇಜಗೌ ಉಪಕುಲಪತಿಗಳಾದುದು ಸಾರ್ಥಕವೆಂದು ನಾವು ಬಗೆಯುತ್ತೇವೆ.

ಮಾತೃ ಭಾಷೆಯ ಜೊತೆಗೆ ಪ್ರಪಂಚದ ಉಳಿದ ಭಾಷೆಗಳೂ ತಮ್ಮ ತಮ್ಮ ಮಟ್ಟದಲ್ಲಿ ಬೆಳೆದು ವಿಶ್ವವಿದ್ಯಾನಿಲಯಕ್ಕೆ ಅಪಾರ ಕೀರ್ತಿ ತರಲೆಂದೂ ಹಾರೈಸುತ್ತೇವೆ.

ತಾ|| 1-1-1970 ರಿಂದ 1-2-1970 ರ ವರೆಗೆ.

# ★ ದ್ವಾದಶ ರಾಶಿ ಭವಿಷ್ಯ ★

**ಲೇ|| ಬಾಳಶಾಸ್ತ್ರಿ ರಾಜಜೋಶಿ ದೋರನಹಳ್ಳಿ.**

**ಮೇಷ** :— ನಿಮ್ಮ ಅದೃಷ್ಟವಿಂದು ಬಹು ಮಟ್ಟಿಗೆ ಸುಧಾರಿಸುವದು. ನಿಮ್ಮ ದೇಹಾರೋಗ್ಯವು ಉತ್ತಮವಾಗುವದಲ್ಲದೆ ಆರ್ಥಿಕ ಬಿಕ್ಕಟ್ಟಿನಿಂದಲೂ ಪಾರಾಗುವಿರಿ. ಈ ಮಾಸದಲ್ಲಿ ನಿಮಗೆ ಫಲವು ಹೆಚ್ಚಿನ ಸಂಭವಿಸಲಿದೆ.

**ವೃಷಭ** :— ಈ ಹಿಂದೆ ಸಾಕಷ್ಟು ಉತ್ತಮವಾಗಿದ್ದ ನಿಮ್ಮ ಅದೃಷ್ಟವು ಇಂದು ಬಹಳ ಕೆಳಮಟ್ಟಕ್ಕೆ ಬಂದಿದೆ. ವಿರೋಧಿ ಮಾರ್ಗದವರೂ ಕೂಡಾ ಸಾಕಷ್ಟು ಪ್ರತಿಕಾರಾಸಕ್ತರಾಗುವದರಿಂದ ನಿಮ್ಮ ಧನ ಮಾನಗಳಿಗೆ ತುಂಬಾ ಧಕ್ಕೆ ಯುನ್ನುಂಟಾಗಲಿವೆ.

**ಮಿಥುನ** :— ಈ ಮಾಸದಲ್ಲಿ ನಿಮ್ಮ ಅದೃಷ್ಟಕರವು ತೆರೆಯುವುದು. ಈ ಕಾಲದಲ್ಲಿ ನೀವು ಆಲಸಿಗರಾಗದೆ ಕಾರ್ಯ ಕ್ಷೇತ್ರದಲ್ಲಿ ಮುನ್ನಡೆಯಿರಿ. ನಿಮ್ಮ ಬಯಕೆಯಂತೆ ಸಕಲ ಕಾರ್ಯಗಳು ನೆರವೇರುವವು.

**ಕರ್ಕ** :— ಈ ಮಾಸದಲ್ಲಿ ನಿಮಗೆ ಮೇಲಿಂದಮೇಲೆ ಅನಿಷ್ಟ ಪರಂಪರೆಗಳು ಬರಲಿವೆ. ಮನಸ್ಸು ನಿಮ್ಮ ಹಿಡಿತದಲ್ಲಿ ಸಿಲ್ಲಲಾರದು. ಚಿಕ್ಕಪುಟ್ಟ ಕಾರಣಗಳಿಂದಲೇ ಆಪ್ತ ಮಿತ್ರರೋಳು ಮನಸ್ತಾಪ ಉಂಟಾಗುವದು.

**ಸಿಂಹ** :— ಈ ಮಾಸವು ನಿಮಗೆ ಕಷ್ಟ ಪರಂಪರೆಗಳು ದಿನೇ ದಿನೇ ಹೆಚ್ಚಾಗುತ್ತವೆ. ಬರುತ್ತ ಸ್ನೆಹಿತ ವರ್ಗದವರಿಂದಲೂ ಬಂಧು ಬಳಗದವರಿಂದಲೂ ನಿಮಗೆ ವಿರೋಧವೆ ಹೆಚ್ಚಾಗುವದು. ವ್ಯಾಪಾರಿ ವರ್ಗದವರನ್ನುಳಿದು ಇತರಿಗೆ ಈ ಮಾಸವು ಶ್ರೇಯಸ್ಕರವಲ್ಲವು.

**ಕನ್ಯಾ** :— ಈ ಮಾಸದಲ್ಲಿ ನಿಮ್ಮ ಹೆಚ್ಚಿನ ಬಯಕೆಗಳು ಕಾರ್ಯರೂಪಕ್ಕೆ ಬರಲಿವೆ. ಬಂಧು ಮಿತ್ರರ ನೆರವು ಚೆನ್ನಾಗಿರುವದರಿಂದ ಪ್ರಬಲರಾದ ವಿರೋಧಿಗಳನ್ನು ಕೂಡಾ ಇದುರಿಸಲು ಶಕ್ತರಾಗುವಿರಿ.

**ತುಲಾ** :— ಈ ಮಾಸವು ನಿಮ್ಮ ಇಚ್ಛೆ ಪೂರ್ಣಗೊಳ್ಳುವುದು ಧನ ಲಕ್ಷ್ಮಿ ನಿಮ್ಮನ್ನು ಹುಡುಕುತ್ತ ಬರುವಳು. ಮನೆಯಲ್ಲಿ ಮಂಗಲ ಕಾರ್ಯಗಳು ಜರುಗುವವು. ನಿಮ್ಮ ಬಯಕೆಯಂತೆ ಎಲ್ಲಾ ಕಾರ್ಯಗಳು ನೆರವೇರುವವು.

**ವೃಶ್ಚಿಕ** :— ಸಂಸಾರಿಕ ತಾಪತ್ರಯವು ದಿನೇ ದಿನೇ ಹೆಚ್ಚುತ್ತಿರುವ ಕಾರಣ ನಿಮ್ಮ ಮನಸ್ಸಿಗೆ ಸ್ವಲ್ಪವು ನೆಮ್ಮದಿ ಸಿಗಲಾರದು ಆರಂಭಿಸಿದ ಕಾರ್ಯಗಳನ್ನು ಹಣದ ಅಡಿಚಣಿಯಿಂದ ಮುಂದುವರಿಸಲಾಗಿದೆ.

**ಧನು** :— ಕಳೆದ ದಿನಗಳಿಗಿಂತ ನಿಮ್ಮ ಅದೃಷ್ಟವಿಂದು ಎಷ್ಟೋ ಉತ್ತಮವಾಗಿರುವದು ನಿಮ್ಮ ಬಯಕೆಯಂತೆ ಕಾರ್ಯಗಳು ನೆರವೇರುವದಲ್ಲದೆ ಸಮಾಜದಲ್ಲಿ ಒಳ್ಳೆ ಹೆಸರನ್ನು ಕೇಳುವಿರಿ ಹಣದ ಬಿಕ್ಕಟ್ಟನಿಂದ ಮುಕ್ತರಾಗುವಿರಿ.

**ಮಕರ** :— ನಿಮ್ಮ ಸುಖಕ್ಕೆ ಈ ತಿಂಗಳ ಯಾವದರಿಂದ ಕೊರತೆ ಇಲ್ಲ. ಏನು ಆಪತ್ತು ಸಂಭವಿಸಿತೆಂದು ಊಹಿಸಲು ಶಕ್ಯವಾಗದು ಒಂದೆಡೆಯಿಂದ ಗ್ರಹಗಳ ವಕ್ರ ದೃಷ್ಟಿಯಿಂದ ನಿಮ್ಮ ಆರೋಗ್ಯ ಮತ್ತು ಆರ್ಥಿಕ ಭಾಗಗಳಿಗೆ ತುಂಬಾ ಹಾನಿ ಮಾಡಲಾಗಿದೆ.

**ಕುಂಭ** :— ಈ ತಿಂಗಳ ನಿಮ್ಮ ಹಲವಾರು ಬಯಕೆಗಳು ಇಡೇರುವವು ನೌಕರಿ ವರ್ಗದವರಿಗೂ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೂ ತುಂಬಾ ಪ್ರತಿಕೂಲವಿದೆ ಆದರೆ ಕೆಲವು ಕಾರಣಗಳಿಂದ ನಿಮ್ಮ ಆರೋಗ್ಯಕ್ಕೆ ತೊಂದರೆ.

**ಮೀನ** :— ಸ್ವತ:ನೀವು ಎಂತಹ ಮಹತ್ಕಾರ್ಯವನ್ನು ಸಾಧಿಸಲು ಶಕ್ತರಿದ್ದರೂ ಗ್ರಹ ಬಲವು ತೀರ ವಿಪರೀತವಾಗಿರುವದರಿಂದ ನಿರಿಕ್ಷಿಸಿದ ಫಲವು ಮಾತ್ರ ಕಾಣಲೊಲ್ಲದು.

### ತೇಜಿ—ಮಂದಿ

ಬೆಳ್ಳಿ, ಭಂಗಾರ, ಕಬ್ಬಿಣ, ತೊಗರಿ, ಹೆಸರು, ಅಗಸಿ, ಅಲಸಂದಿ, ಎಳ್ಳು, ಶೇಂಗಾ ಕುಶಿಬಿ, ಕಡಲೆ, ಜೋಳ, ಸಜ್ಜಿ, ಇವುಗಳಿಗೆ ತೇಜಿ ಯೋಗವು

ನವಣಿ, ಉದ್ದು, ಹತ್ತಿ, ಅರಳೆ, ಬೆಲ್ಲ, ಸಕ್ಕರಿ, ತುಪ್ಪ, ಹುರುಳಿ, ಗುರೆಳ್ಳು, ಅಕ್ಕಿ, ಗೋಧಿ, ಇವುಗಳಿಗೆ ಮಂದಿ ಯೋಗವು.

## ಆಶ್ರಯದಾತರು

ಶ್ರೀ. ಚಿಕ್ಕಾರೆಡ್ಡಿ ಪಾಟೀಲ ಸಗರಾದಪುರ-ಶಹಾಪುರ ೫೧—೦೦

ಧನ ಸಹಾಯ ಸಲ್ಲಿಸಿದ ಈ ಮಹನೀಯರಿಗೆ ನಮ್ಮ ಅನಂತ ಕೃತಜ್ಞತೆಗಳು.

— ಸಂಪಾದಕ

---

೩೬ ನೇ ಪುಟದಿಂದ ಬಂದುದು

## ನಮ್ಮನ್ನಗಲಿದ ಪ್ರೊ|| ಡಿ. ಕೆ. ಭೀಮಸೇನರಾಯರು

ಕಳೆದ ತಿಂಗಳು ೨೯ ನೇ ತಾರೀಖು ಶನಿವಾರ ಮಧ್ಯರಾತ್ರಿ ಕನ್ನಡದ ಒಬ್ಬ ಘನ ವಿದ್ವಾಂಸರೂ ಶ್ರೇಷ್ಠ ಸಾಹಿತಿಗಳೂ ಉತ್ತಮ ಸಂಶೋಧಕರೂ ಆದ ಪ್ರೊ|| ಡಿ. ಕೆ. ಭೀಮಸೇನರಾಯರು ನಮ್ಮನ್ನಗಲಿ ಅಪಾರ ದುಃಖಕ್ಕೀಡುಮಾಡಿದ್ದಾರೆ. ಇದೇ ವರ್ಷ ಮೈಸೂರು ಸರ್ಕಾರ ಅವರಿಗೆ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನು ನೀಡಿ ಪುರಸ್ಕರಿಸಿತ್ತು. ಮರಣ ಕಾಲಕ್ಕೆ ಅವರಿಗೆ ೭೦ ವರ್ಷಗಳು ಇದ್ದವು.

ಪ್ರೊ|| ಡಿ. ಕೆ. ಭೀ. ಅವರು ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ 'ದಿದ್ದಿಗಿ' ಎಂಬ ಚಿಕ್ಕ ಗ್ರಾಮದ ಒಂದು ಸುಸ್ಸಂಪನ್ನ ಮನೆತನದಲ್ಲಿ ೧೯೦೩ ರಲ್ಲಿ ಜನಿಸಿದರು. ಅವರ ಪ್ರಾಥಮಿಕ ವಿದ್ಯಾಭ್ಯಾಸ ದಿದ್ದಿಗಿಯಲ್ಲಿಯೇ ನಡೆಯಿತು. ತರುವಾಯ ಸಿಂಧನೂರು ಮತ್ತು ರಾಯಚೂರುಗಳಲ್ಲಿ ಮುಂದಿನ ಅಭ್ಯಾಸ ಮುಂದುವರಿದು ಹೈದ್ರಾಬಾದ ನಿಜಾಮ ಕಾಲೇಜಿನಿಂದ ಬಿ. ಎ. (ಕನ್ನಡ) ಪದವೀಧರರಾದರು. ಮುಂದಿನ ಅಭ್ಯಾಸಕ್ಕೆ ಹೈದ್ರಾಬಾದಿನಲ್ಲಿ ಯಾವ ಸೌಲಭ್ಯಗಳಿಲ್ಲದಿರುವುದರಿಂದ ಅವರು ಮೈಸೂರು ಮಹಾರಾಜ ಕಾಲೇಜಿನಿಂದ ೧೯೨೬ ರಲ್ಲಿ ಉತ್ತಮ ದರ್ಜೆಯಲ್ಲಿ ಎಂ. ಎ. ಪದವೀಧರರಾದರು.

ಎಂ. ಎ. ಮುಗಿಸಿದ ತರುವಾಯ ಪ್ರೊ|| ಡಿ. ಕೆ. ಭೀ. ಅವರು ಹೈದರಾಬಾದಿನ ವಿಶ್ವವಿದ್ಯಾನಿಲಯದಲ್ಲಿ ಕೆಲಸಕ್ಕೆ ಸೇರಿಕೊಂಡರು. ನಿವೃತ್ತಿಯ ಸಮಯದಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರೂ ಆಗಿದ್ದರು. ಇವರು ನಾಲ್ಕುದಶಕದಿಂದಲೂ ಹಲವು ಅಂದದಲ್ಲಿ ಕನ್ನಡ ಸಾಹಿತ್ಯಕ್ಕೆ ಅವಿರತ ಸೇವೆ ಸಲ್ಲಿಸಿ ಕನ್ನಡದ ಕಣಜವನ್ನೇ ತುಂಬಿದ್ದಾರೆ. ಶ್ರೀಯುತರು ಪ್ರಾಧ್ಯಾಪಕರಾಗಿ, ಸಂಶೋಧಕರಾಗಿ, ಕವಿಗಳಾಗಿ, ವಿಮರ್ಶಕರಾಗಿ, ಪತ್ರ ಪುಸ್ತಕ ಪ್ರಕಾಶನದ ನಿಯೋಜಕರಾಗಿ ಅನೇಕ ವಿಧಗಳಲ್ಲಿ ಸೇವೆ ಸಲ್ಲಿಸಿದ್ದಾರೆ.

---

## — ಸಾದರ ಸ್ವೀಕಾರ —

ಶರಣ ಪ್ರಸಾದ :– (ಶಿವಶರಣ-ಶರಣೆಯರ ಆತ್ಮ ನಿವೇದನೆಗಳ ಸಂಕಲನ)

ಸಂಪಾದಕರು : ಶ್ರೀಗಳಾದ ಸಿದ್ಧಯ್ಯ ಪುರಾಣಿಕ ಮತ್ತು ಬಿ. ಎ. ಸನದಿ

ಪ್ರಕಾಶಕರು : ನೃಪತುಂಗ ಪ್ರಕಾಶನ ಕಲಬುರ್ಗಿ.

ಪುಟಗಳು : ೧೮೮ ಬೆಲೆ : ಮೂರು ರೂಪಾಯಿ ಪ್ರಥಮ ಮುದ್ರಣ ೧೯೭೪

# ಮಂದಾಕಿನಿ



ಈ ಪತ್ರಿಕೆಯು ಜಿ.ಎಂ. ಗುರುಸಿದ್ಧಶಾಸ್ತ್ರಿ (ಕಾವ್ಯತೀರ್ಥ) ರಾಮುಗಿರಿ ಹಿರೇಮಠ ಅವರಿಂದ ಸಂಪಾದಿಸಲ್ಪಟ್ಟು ಜಿ. ಎಂ. ಗುರುಬಸವಾರ್ಯ ಇವರಿಂದ ಶಹಪುರ ಮಂದಾಕಿನಿ ಕಾರ್ಯಾಲಯದಲ್ಲಿ ಪ್ರಕಾಶಿಸಲ್ಪಟ್ಟಿತು.